December 83 (7) P 7



# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

ಮಾನವರಿಗೆ ಸಮಾಜದಲ್ಲಿ ಎಷ್ಟೋ ಸಮಸ್ಯೆಗಳು ಇದಿರಾಗುತ್ತವೆ. ಮಕ್ಕಳ ವಿದ್ಯೆ, ಹೆಣ್ಣು ಮಕ್ಕಳ ಮದುವೆ ಇವು ಎಲ್ಲಕ್ಕಿಂತ ಮುಖ್ಯವಾದುವೆಂದು ಹೆಣಗಾಡುತ್ತಾರೆ. ಎಲ್ಲದಕ್ಕೂ ಹಣದ ಸಮಸ್ಯೆ ಬಹುಮುಖ್ಯ. ಸ್ವಲ್ಪ ಸ್ವಲ್ಪ ಹಣ ಬಂದರೆ ನ್ಯಾಯವಾಗಿ ಸಮಾಳಿಸಿಕೊಂಡು ಹೋಗುತ್ತಾರೆ. ಆದರೆ ಅದೃಷ್ಟವಶಾತ್ ಧಂಡಿಯಾಗಿ ಹಣ ಬಂದು ಬಿಟ್ಟರೆ ? ಹಣಕ್ಕೂ ಸ್ವಾರ್ಥಕ್ಕೂ ಎಂತಹ ನಿಕಟ ಸಂಬಂಧವೆಂಬುದನ್ನು ಈ ಸಂಚಿಕೆಯಲ್ಲಿ "ಲೋಕರೀತಿ" ಎಂಬ ಸಣ್ಣ ಕಥೆ ತಿಳಿಸುತ್ತದೆ.

## ಅಮರವಾಣಿ

**ಜೀವನ ಗ್ರಹಣೇ ನಮ್ರಾಃ ಗೃಹೀತ್ವಾ ಪುನರುನ್ನತಾಃ**
**ಕಿಂ ಕನಿಷ್ಠಾಃ ಕಿಮು ಜ್ಯೇಷ್ಠಾಃ ಘಟೀಯಂತ್ರಸ್ಯ ದುರ್ಜನಾಃ**

ದುಷ್ಟರು ಬದುಕುವ ಮಾರ್ಗಕ್ಕಾಗಿ ಮೊದಲು ತುಂಬಾ ಬಾಗಿಕೊಂಡಿದ್ದು, ಕೆಲಸವಾಗುತ್ತಲೇ ಬೀಗಿಕೊಳ್ಳುತ್ತಾರೆ. ಏತವು ನೀರಿಗಾಗಿ ಬಾಗಿ ಆಮೇಲೆ ನೆಟ್ಟಗೆ ನಿಲ್ಲುತ್ತದೆ. ದುಷ್ಟರು ಅದಕ್ಕೆ ಅಣ್ಣನೋ ತಮ್ಮನೋ ಆಗುವರು.

ಸಂಪುಟ : ೭೧ ಡಿಸೆಂಬರ್ '೮೩ ಸಂಚಿಕೆ : ೬

ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦



## ಚಂದಮಾಮನ ಹರಟೆ

### ' ಗೀತಾಂಜಲಿ ' ಗೀತಗಳು



ಭಾರತ್‌ನಲ್ಲಿ ೧೯೭೭ ನೇ ವರ್ಷದಲ್ಲಿ ಗೀತಾಂಜಲಿ ಕೇವಲ ಹದಿನಾರು ವರ್ಷ ತುಂಬುವ ಮೊದಲೇ ಕ್ಯಾನ್ಸರ್ ವ್ಯಾಧಿಗೆ ಬಲಿಯಾದಳು. ಕೆಲವು ದಿನಗಳ ಮೇಲೆ ಗೀತಾಂಜಲಿಯ ಹಾಸಿಗೆಯ ಕೆಳಗೆ ಅವಳು ಬರೆದ ಕೆಲವು ಗೀತೆಗಳು ಅವಳ ತಾಯಿಗೆ ಲಭಿಸಿದುವು. "ಸಿಡಿಲಾಗಿ ಮೊರೆಯುವ ಮಿಂಚುಗಳೊಂದಿಗೆ ನನ್ನ ದಾರಿ ಬೆಳಗಿ ಹೋಗುತ್ತದೆ" ಎಂಬಂತಹ ಕೋಮಲ ಭಾವಗಳಿಂದ ತುಂಬಿದ ಸಣ್ಣ ಹುಡುಗಿ ಗೀತಾಂಜಲಿಯ ಗೀತೆಗಳನ್ನು ಇಂಗ್ಲೆಂಡಿನ ಓರಿಯಲ್ ಪ್ರೆಸ್, ಪ್ರೀತೀಷ್ ನಂದಿಯ ಪರಿಚಯ ವಾಕ್ಯಗಳಿಂದ ಪ್ರಕಟಪಡಿಸಿತು.

### ಆಧುನಿಕ ' ಅಜ್ಞಾನ '

ವಿಜ್ಞಾನದ ಬೆಳಕಿನಲ್ಲಿ ದಿನದಿನಕ್ಕೂ ಮನುಷ್ಯನೇ ಮನುಷ್ಯನಿಗೆ ಹೊಂಡ ತೋಡುತ್ತಾನೆ. ೧೯೪೫ ನೇ ವರ್ಷದಲ್ಲಿ ಪ್ರಯೋಗಿಸಿದ ಅಣುಬಾಂಬು ಹಿರೋಶಿಮಾವನ್ನು ಸರ್ವನಾಶ ಮಾಡಿತು. ಪ್ರಸ್ತುತ ಪ್ರಪಂಚದಲ್ಲಿ ಪೇರಿಸಿಕೊಂಡು ಹೋಗುವ ಅಣುಬಾಂಬುಗಳನ್ನು ಹಿರೋಶಿಮಾ ಅಣುಬಾಂಬು ಪರಿಮಾಣದೊಂದಿಗೆ ವಿಭಜನೆ ಮಾಡಿ ಪ್ರಯೋಗಿಸಿದರೆ, ನಿಮಿಷಕ್ಕೆ ಒಂದು ಬಾಂಬಿನಂತೆ ಎರಡು ವರ್ಷಗಳವರೆಗೆ ಬರುತ್ತವಂತೆ. ಅಣುಯುದ್ಧದಿಂದ, ವಾತಾವರಣದಲ್ಲಿ ಕವಿಯಲಿರುವ ದುಷ್ಪರಿಣಾಮಗಳನ್ನು ಊಹಿಸಲಾಗದಷ್ಟು ಅಜ್ಞಾನದಲ್ಲಿ ಎಲ್ಲಾ ಪ್ರಯತ್ನಗಳೂ ಇವೆ ಎನ್ನುತ್ತಾನೆ ಪ್ರಮುಖ ವಿಜ್ಞಾನವೇತ್ತ ಡಾಕ್ಟರ್ ಹೆಲೆನ್‌ಕೋಲ್ಡ್ ಕಾಟ್.





### ಓಟದ ಪಂಥದಲ್ಲಿ ಕೋವಿದರು !

ಕೆನ್ಯಾಕ್ಕೆ ಸೇರಿದ ಮೈಕ್ ಬಾಯಿಟ್ ಮೈಲು ದೂರವನ್ನು ಮೂರು ನಿಮಿಷ ಇಪ್ಪತ್ತೆಂಟು ಸೆಕೆಂಡ್‌ಗಳಲ್ಲಿ ಓಡಿ, ಓಡುವ ಪಂಥದಲ್ಲಿ ಹೊಚ್ಚ ಹೊಸ ರಿಕಾರ್ಡ್ ಸೃಷ್ಟಿಸಿದ್ದಾನೆ. ಆಕ್‌ಲಾಂಡಿನಲ್ಲಿ ನಡೆದ ಈ ಇಳಿಜಾರಿನ ಓಟ ಪಂದ್ಯದಲ್ಲಿ ಮತ್ತೊಂದು ಸೆಕೆಂಡ್ ಹೆಚ್ಚಾಗಿ ತೆಗೆದುಕೊಂಡು ಅಮೆರಿಕಾಕ್ಕೆ ಸೇರಿದ ಸ್ಟೀವ್‌ಕಾಟ್ ಎರಡನೇ ಸ್ಥಾನ ಗಳಿಸಿದ್ದಾನೆ.

## ನಿಮಗೆ ಗೊತ್ತೇ ?

೧. ಮಾನವ ಶರೀರದ ರಕ್ತನಾಳಗಳನ್ನು ಒಂದರ ಹಿಂದೊಂದಾಗಿ ಇರಿಸಿದರೆ ಎಷ್ಟು ದೂರವಾಗುವುದೆಂದು ಊಹಿಸಬಲ್ಲಿರಾ ?

೨. ಮಾನವರ ಕಣ್ಣು ಎಷ್ಟು ಬಣ್ಣಗಳನ್ನು ಗುರುತಿಸುತ್ತವೆಂದು ನಿಮಗೆ ಗೊತ್ತೇ ?

೩. ಮನುಷ್ಯನು ಎಷ್ಟು ಬಗೆಯ ವಾಸನೆಗಳನ್ನು ಗುರುತಿಸಲು ಸಾಧ್ಯ ?

೪. ಪ್ರಪಂಚದಲ್ಲಿ ಅಧಿಕವಾಗಿ ಪದಜಾಲವಿರುವ ಭಾಷೆ ಯಾವುದು ?

೫. ಒಂದೇ ಸಮಯದಲ್ಲಿ ಒಂದು ಕೈಯಿಂದ ಬರೆಯುತ್ತ, ಮತ್ತೊಂದು ಕೈಯಿಂದ ಚಿತ್ರಗಳನ್ನು ಮಾಡಿದ ಮೇಧಾವಿ ಯಾರು ?

(ಉತ್ತರ ೬೪ ನೇ ಪುಟದಲ್ಲಿ)



# ಅಪರೂಪ ವಜ್ರ

ಹಿಂದೆ ಮಣಿಭದ್ರನೆಂಬೊಬ್ಬ ವರ್ತಕನು ದೇಶ ದೇಶಗಳಲ್ಲಿ ವ್ಯಾಪಾರ ಮಾಡುತ್ತ, ಅನೇಕ ವರ್ಷಗಳ ಮೇಲೆ ತನ್ನ ಅವಂತೀ ರಾಜ್ಯಕ್ಕೆ ಬಂದನು. ಅವನದು ವಜ್ರಗಳ ವ್ಯಾಪಾರವಾಗಿತ್ತು. ಆದರೆ ಅವನು ಅವಂತೀ ರಾಜ್ಯವನ್ನು ಸೇರುವಾಗ ಅವನ ಹತ್ತಿರವಿದ್ದ ಉತ್ತಮ ವಜ್ರಗಳೆಲ್ಲ ಮುಗಿದು ಒಂದೇ ಒಂದು ನಿಜವಾದ ವಜ್ರವಿದ್ದಿತು. ಉಳಿದುವೆಲ್ಲ ಕೀಳ್ಮಟ್ಟದ ವಜ್ರಗಳು. ಆ ಬೆಲೆಬಾಳುವ ವಜ್ರವು ಬಹಳ ಅಪರೂಪದ್ದಾಗಿತ್ತು. ಅದನ್ನು ಧರಿಸಿದವರ ಭವಿಷ್ಯತ್ತು ಬಹು ಭವ್ಯವಾಗುತ್ತದೆಂದು ಮಣಿಭದ್ರನು ಅವರಿವರೊಡನೆ ಹೇಳುತ್ತಿದ್ದನು.

ಅವಂತೀ ರಾಜನಿಗೆ ಊರಿಗೆ ಬಂದ ವಜ್ರಗಳ ವರ್ತಕನ ಸಂಗತಿ ಗೊತ್ತಾಯಿತು. ಅವನು ಮಣಿಭದ್ರನನ್ನು ತನ್ನ ಬಳಿಗೆ ಕರೆಯಿಸಿ, "ನಿನ್ನ ಹತ್ತಿರ ಅಪರೂಪದ ವಜ್ರವಿರುವುದಾದರೆ ಅದನ್ನು ಮೊದಲು ನನಗೆ ತೋರಿಸಬೇಕಿತ್ತು. ಹಾಗೆ ಮಾಡದೆ ಅವರಿವರ ಹತ್ತಿರ ಅದರ ಮಹತ್ವವನ್ನು ಕುರಿತು ಹೇಳಿ ಮಾರಲು ನೋಡಿದಿ. ಇದು ನಮ್ಮನ್ನು ಅಗೌರವಪಡಿಸಿದಂತೆ ಹೌದೋ ಅಲ್ಲವೋ ?" ಎಂದನು.

ರಾಜನು ಹೀಗೆ ಹೇಳಿದ ಕೂಡಲೇ ಮಣಿಭದ್ರನು ಬೆಪ್ಪುಬಡೆದಂತಾದನು. ಏಕೆಂದರೆ ಈಗ ಒಂದು ಗಂಟೆಯ ಮೊದಲು ಅವಂತೀ ಸೈನ್ಯಾಧಕ್ಷನು ಅವನನ್ನು ಕರೆಯಿಸಿ, ಅಪರೂಪವಾದ ಆ ವಜ್ರವನ್ನು ತನ್ನ ಹೊರತು ಬೇರೆ ಯಾರಿಗೂ ಮಾರಕೂಡದೆಂದು ಹೆದರಿಸಿದ್ದನು. ಆದರೆ ಅವನು ಅದಕ್ಕೆ ತಕ್ಕ ಬೆಲೆ ಕೊಡುತ್ತಾನೆಂಬ ನಂಬುಗೆ ಇರಲಿಲ್ಲ. ಬೆಲೆ ನಿರ್ಣಯ ಮಾಡಿಕೊಂಡು, ಆಮೇಲೆ ಬಂದು ಹೇಳುತ್ತೇನೆಂದು ಅವನಿಗೆ ಹೇಳಿ ಮಣಿಭದ್ರನು ಜಾರಿಕೊಂಡಿದ್ದನು.

ಮಣಿಭದ್ರನು ಬಹಳ ವಿನಯದಿಂದ ರಾಜನೊಂದಿಗೆ, "ಮಹಾಪ್ರಭೂ, ನಾನು ಅವಂತಿ ದೇಶದಲ್ಲಿ ಹುಟ್ಟಿ ಬೆಳೆದವನೇ. ಕೆಲವು ವರ್ಷಗಳ ಹಿಂದೆ ವ್ಯಾಪಾರದ ನೆವನದಲ್ಲಿ ಇತರ ದೇಶಗಳಿಗೆ ಹೋಗಿ, ಇದೀಗ ಸ್ವದೇಶಕ್ಕೆ ಬಂದಿದ್ದೇನೆ. ತಮ್ಮ ದರ್ಶನಕ್ಕೆ ಬರಬೇಕೆಂದು ಸಿದ್ಧತೆ ಮಾಡಿಕೊಳ್ಳುವಾಗಲೇ, ತಾವು ಕರೆಯಿಸಿಕೊಂಡಿದ್ದೀರಿ" ಎಂದನು.

ಇದನ್ನು ಕೇಳಿ ಅವಂತಿ ರಾಜನು ಹೆಮ್ಮೆಯಿಂದ, ಮೀಸೆಯ ಮೇಲೆ ಕೈಯಾಡಿಸಿ, "ಓಹೋ !

ವಿ. ಎಸ್. ನಾರಾಯಣ



ಹಾಗಾದರೆ ನಮಗಾಗಿ ಆ ಅಪೂರ್ವ ವಜ್ರವನ್ನೂ ತಂದಿರಬೇಕು. ತೆಗೆದು ತೋರಿಸು " ಎಂದನು.

ಮಣಿಭದ್ರನು ಸಮಯಸ್ಫೂರ್ತಿ ತಂದುಕೊಂಡು "ವಜ್ರವೇನೂ ತರಲಿಲ್ಲ ಪ್ರಭುಗಳೇ. ತಾವು ಕರೆಯುವಿರೆಂದು ಕೇಳಿದ ಕೂಡಲೇ, ಗಾಬರಿಯಲ್ಲಿ ಆವಸರದಿಂದ ಹೊರಟು ಬಂದುಬಿಟ್ಟೆ " ಎಂದನು.

"ಸರಿ ಸರಿ! ಹಾಗಾದರೆ ಈಗಲೇ ಮನೆಗೆ ಹೋಗಿ ಆ ವಜ್ರವನ್ನು ತೆಗೆದುಕೊಂಡು ಬಂದುಬಿಡು " ಎಂದನು ರಾಜ.

ಮಣಿಭದ್ರನು 'ಬದುಕು ಬಡಜೀವವೇ ' ಎಂದುಕೊಳ್ಳುತ್ತ ಅಲ್ಲಿಂದ ಹೊರಟನು. ಅವನು ಅರಮನೆಯ ಆವರಣವನ್ನು ದಾಟುವ ಮೊದಲೇ ಮಂತ್ರಿ ಅವನ ಮುಂದೆ ಬಂದು, "ಏನಯ್ಯಾ ವರ್ತಕಾ, ನೀನು ರಾಜನಿಗೆ ಎಂತಹ ವಜ್ರ ಕೊಡುವಿಯೋ ನನಗೆ ಗೊತ್ತಿಲ್ಲ. ಅಪರೂಪದ ವಜ್ರವನ್ನು ಮಾತ್ರ ನನಗೇ ಕೊಡಬೇಕು. ಹಾಗೆ ಕೊಡದೆ ಹೋದರೆ ನೀನು ಈ ರಾಜ್ಯದಲ್ಲೇ ಇಲ್ಲದ ಹಾಗೆ ಮಾಡಿಬಿಡುವೆನು ! " ಎಂದು ಹೆದರಿಸಿದನು.

ಮಣಿಭದ್ರನಿಗೆ ಏನೂ ತೋರದಾಯಿತು. ಸೈನ್ಯಾಧ್ಯಕ್ಷನು ಬಲಪ್ರಯೋಗದಿಂದ, ರಾಜನು ಅಧಿಕಾರ ಮದದಿಂದ, ಮಂತ್ರಿ ಬುದ್ಧಿವಂತನೆಂಬ ಗರ್ವದಿಂದ ತನ್ನ ಹತ್ತಿರವಿರುವ ಅಪರೂಪದ ಒಂದು ವಜ್ರವನ್ನು ತಮ್ಮದಾಗಿಸಲು ನೋಡುತ್ತಾರೆ. ತಾನು ಈ ಮೂವರು ಬಲಿಷ್ಠರಿಂದ ತಪ್ಪಿಸಿಕೊಳ್ಳುವ ಬಗೆ ಹೇಗೆಂದು ವರ್ತಕನಿಗೆ ಗೊತ್ತಾಗಲಿಲ್ಲ.

"ಆಗಲಿ ಸ್ವಾಮಿ, ಹಾಗೇ ಮಾಡುತ್ತೇನೆ. ಶುಭ ದಿನ ನೋಡಿ ಬರುತ್ತೇನೆ " ಎಂದು ಉಪಾಯವಾಗಿ ಹೇಳಿ ಮಣಿಭದ್ರನು ತನ್ನ ಮನೆಗೆ ಹಿಂದಿರುಗಿದನು. ಆಮೇಲೆ ಆರೇಳು ದಿನಗಳವರೆಗೆ ಮಣಿಭದ್ರನು ಮಂತ್ರಿಗೂ, ಸೈನ್ಯಾಧ್ಯಕ್ಷನಿಗೂ ಕಾಣಲೇ ಇಲ್ಲ.

ಒಂದು ದಿನ ರಾಜನು ಕಳುಹಿಸಿದ ಗೂಢಚಾರರು ಮಣಿಭದ್ರನನ್ನು ರಾಜನ ಬಳಿಗೆ ಕರೆದುಕೊಂಡು ಹೋದರು. ರಾಜನು ಮಣಿಭದ್ರನನ್ನು ಕೋಪದಿಂದಲೇ ಮಾತಾಡಿಸಿದನು. ಮಣಿಭದ್ರನು ಏನೂ ಮಾತಾಡದೆ ರಾಜನಿಗೆ ಒಂದು ಉಂಗುರವನ್ನು ಕೊಟ್ಟನು. ಅದರಲ್ಲಿ ಥಗಥಗಿಸುವ ಒಂದು ವಜ್ರ ಹೊದುಗಿಸಲ್ಪಟ್ಟಿದ್ದಿತು.

ಅದನ್ನು ನೋಡಿ ರಾಜನ ಮುಖದಲ್ಲಿ ಒಂದು ಕ್ಷಣ ಆನಂದವು ಹೊಳೆಯಿತು. ಮರುಕ್ಷಣದಲ್ಲಿ ಅವನು ತುಟಿಗಳನ್ನು ಬಿಗಿದು ಹುಬ್ಬುಗಂಟಿಕ್ಕಿ, "ಇದು ನಿಜಕ್ಕೂ ಅಪರೂಪದ ವಜ್ರವಿರುವ ಉಂಗುರವೇನು ? " ಎಂದು ಕೇಳಿದನು.

ಮಣಿಭದ್ರನು ಮೌನವಾಗಿ ಹೌದೆಂಬಂತೆ ತಲೆಯಾಡಿಸಿದನು. ರಾಜನು ಅವನಿಗೊಂದು ಸಣ್ಣ ಕಾಣಿಕೆಯನ್ನು ಕೊಟ್ಟು ಕಳುಹಿಸಿಬಿಟ್ಟನು.

ಅಲ್ಲಿಂದ ಹೊರಬರುವಾಗ ದಾರಿಯಲ್ಲಿ ಮಂತ್ರಿ ಅವನ ಮುಂದೆ ಬಂದು ನಿಂತುದನ್ನು ನೋಡಿ,

ಮಣಿಭದ್ರನು, “ಅಯ್ಯಾ, ನಾನೀಗ ನಿಮ್ಮ ಬಳಿಗೇ ಬರಲಿಕ್ಕಿದ್ದೆ” ಎಂದು ಹೇಳಿ ಒಂದು ಉಂಗುರವನ್ನು ತೆಗೆದು ಅವನಿಗೆ ಕೊಟ್ಟನು. ಆ ಉಂಗುರದಲ್ಲಿಯೂ ಒಂದು ವಜ್ರವು ಹುದುಗಿಸಲ್ಪಟ್ಟಿತ್ತು.

ಮಂತ್ರಿ ಅದನ್ನು ಅನುಮಾನದಿಂದ ನೋಡುತ್ತ, “ಅಸಲು ವಜ್ರವನ್ನು ಉಂಗುರದಲ್ಲಿ ಹುದುಗಿಸಿ ರಾಜನಿಗೆ ಕೊಟ್ಟಿರುವಿ. ಈ ವಜ್ರವು ಬೇರೆ ಬಗೆಯ ಯಾವುದೋ ಕೀಳ್ಮಟ್ಟದ್ದಾಗಿರಬೇಕು. ಅಪರೂಪದ ವಜ್ರವಲ್ಲ” ಎಂದನು.

ಆ ಮಾತು ಕೇಳಿ ನೊಂದುಕೊಳ್ಳುವಂತೆ ಮುಖ ಮಾಡಿಕೊಂಡು ಮಣಿಭದ್ರನು, “ಅಯ್ಯಾ, ನಿಜ ಹೇಳುತ್ತೇನೆ. ಈ ವಜ್ರವೇ ಅಪರೂಪದ ವಜ್ರ. ಬೇಕಾದರೆ ಯಾರಾದರೂ ಒಳ್ಳೆಯ ವಜ್ರ ನಿಪುಣರಿಗೆ ತೋರಿಸಿರಿ” ಎಂದನು.

ಅವನ ಉತ್ತರವನ್ನು ಕೇಳಿ ಮಂತ್ರಿಗೆ ನಂಬಿಗೆಯುಂಟಾಯಿತು. ಅವನು ಆ ಉಂಗುರವನ್ನು ತೆಗೆದುಕೊಂಡು, ತನಗೆ ತೋರಿದ ಏನೋ ಬಹುಮಾನ ಕೊಟ್ಟು ಮಣಿಭದ್ರನನ್ನು ಕಳುಹಿಸಿದನು.

ಮಣಿಭದ್ರನು ತನ್ನ ಮನೆಗೆ ಹೋದಾಗ ಸೈನ್ಯಾಧ್ಯಕ್ಷನು ಅವನಿಗಾಗಿ ಕಾದುಕೊಂಡಿದ್ದನು. ರಾಜನಿಗೂ ಮಂತ್ರಿಗೂ ಕೊಟ್ಟ ಹಾಗೆಯೇ, ಅವನಿಗೂ ಒಂದು ಉಂಗುರವನ್ನು ಕೊಟ್ಟನು ಮಣಿಭದ್ರ.

ಈ ವಿಧವಾಗಿ ಮಣಿಭದ್ರನಿಗೆ ಕೆಲವು ದಿನಗಳವರೆಗೆ ಆ ಮೂವರು ಪ್ರಭಾವಶಾಲಿಗಳಿಂದ ಅಪಾಯ ತಪ್ಪಿದಂತಾಯಿತು. ಆದರೆ ಆ ಸಂತೋಷವು ಬಹಳ ಕಾಲ ನಿಲ್ಲಲಿಲ್ಲ. ರಾಜ, ಮಂತ್ರಿ, ಸೈನ್ಯಾಧ್ಯಕ್ಷರು ಒಂದು ಔತಣದ ಸಮಯದಲ್ಲಿ ತಮ್ಮ ತಮ್ಮ ವಜ್ರದ ಉಂಗುರಗಳೊಂದಿಗೆ ಬಂದು ಒಂದೇ ಕಡೆ ಕಲೆತುಕೊಂಡರು.

ಮಾತಿನ ಸಂದರ್ಭದಲ್ಲಿ ಅವರ ಹತ್ತಿರವಿರುವ ವಜ್ರಗಳಲ್ಲಿ ಯಾವುದು ಅಪರೂಪದ್ದೆಂಬ ತರ್ಕವು



ಹೊರಟಿತು. ಮೂವರೂ ಕೂಡಿ ಮಣಿಭದ್ರನನ್ನು ತಮ್ಮ ಬಳಿಗೆ ಕರೆಯಿಸಿದರು.

“ಏನೋಯ್, ಮಣಿಭದ್ರಾ, ನಿನ್ನ ಹತ್ತಿರ ಇದ್ದುದು ಒಂದೇ ಒಂದು ಅಪರೂಪದ ವಜ್ರವಲ್ಲವೆ? ನಾವು ಮೂವರಿಗೂ ಅಪರೂಪದ ವಜ್ರ ಹೊದಿಸಿರುವ ಮೂರು ಉಂಗುರ ಕೊಟ್ಟಿರುವಿ. ಈ ಮೂರರಲ್ಲಿ ನಿಜವಾದ ಅಪರೂಪದ ವಜ್ರವಿರುವ ಉಂಗುರವು ಯಾವುದು?” ಎಂದು ರಾಜನು ಕೇಳಿದನು.

ಮಣಿಭದ್ರನು ಇಕ್ಕಟ್ಟಿನಲ್ಲಿ ಬಿದ್ದನು. ಆದರೂ ಅವನು ಕೂಡಲೇ ಸಮಾಳಿಸಿಕೊಂಡು, “ಪ್ರಭೂ, ಅಧಿಕಾರವೂ, ಬುದ್ಧಿವಂತಿಕೆಗಳೂ, ಬಲಪರಾಕ್ರಮಗಳೂ ಇರುವ ನೀವು ಮೂವರೊಂದಿಗೂ ವಿನೋದ ಮಾಡುವ ಧೈರ್ಯ ನನ್ನಂಥವನಿಗಿದ್ದೀತೇ? ಮೂರೂ ಅಪರೂಪದ ವಜ್ರಗಳು ಹೊದುಗಿಸಿದ ಉಂಗುರಗಳೇ. ವ್ಯಾಪಾರವಾಗಲಿಕ್ಕಾಗಿ ಒಂದೇ ಅಪರೂಪದ

ವಜ್ರ ಅನ್ನುತ್ತಾ ಬಂದೆ, ಅಷ್ಟೇ." ಎಂದನು. "ಎಷ್ಟಾದರೂ ನೀನು ವರ್ತಕ. ನಿನ್ನ ಮಾತನ್ನು ಹೇಗೆ ನಂಬುವುದು ?" ಎಂದನು ರಾಜ.

ಆಗ ಮಣಿಭದ್ರನು ಅವರಿಗೆ ನಗರದಲ್ಲಿರುವ ಒಬ್ಬ ವಜ್ರ ಪರೀಕ್ಷಾ ನಿಪುಣನ ಹೆಸರು ಹೇಳಿ, ಅವನನ್ನು ಕರೆಯಿಸಿ ಉಂಗುರಗಳನ್ನು ಪರೀಕ್ಷೆಗೆ ಇಡಲು ಹೇಳಿದನು.

ಮರುದಿನ ರಾಜನ ಕರೆಯಂತೆ ಆ ವಜ್ರ ನಿಪುಣನು ಬಂದು, ಮೂರು ಉಂಗುರಗಳನ್ನೂ ಪರೀಕ್ಷೆ ಮಾಡಿ, ಅವುಗಳಲ್ಲಿರುವುದು ಅಪರೂಪದ ಬಹು ಬೆಲೆಯ ವಜ್ರಗಳೆಂದೇ ಹೇಳಿದನು. ಅದನ್ನು ಕೇಳಿ ರಾಜ, ಮಂತ್ರಿ, ಸೈನ್ಯಾಧ್ಯಕ್ಷರು ಬಹಳ ಸಂತೃಪ್ತರಾದರು.

ಆ ವಜ್ರ ನಿಪುಣನು ಅಲ್ಲಿಂದ ನೆಟ್ಟಗೆ ಮಣಿಭದ್ರನ ಮನೆಗೇ ಹೋದನು. ಆ ಸಮಯದಲ್ಲಿ ಮಣಿಭದ್ರನು ಅಲ್ಲಿಂದ ಪ್ರಯಾಣ ಮಾಡಲು ಹೆಂಡತಿಯೊಂದಿಗೆ ಗಂಟುಮೂಟೆ ಕಟ್ಟುತ್ತ ಸಿದ್ಧನಾಗುತ್ತಿದ್ದನು.

"ಯಾವ ತೊಂದರೆಯೂ ಇಲ್ಲದೆ ನೀನು ಹೇಳಿದ ಕೆಲಸ ಜಯಪ್ರದವಾಗಿ ಮುಗಿಸಿದೆನಷ್ಟೆ ? ನನಗೆ ಕೊಡುತ್ತೇನೆಂದು ಹೇಳಿದ ಅಪರೂಪದ ವಜ್ರ ಎಲ್ಲಿದೆ ?" ಎಂದು ನಗುತ್ತಾ ಕೇಳಿದನು ವಜ್ರ ಪರೀಕ್ಷಾ ನಿಪುಣ.

ಮಣಿಭದ್ರನು ಅವನಿಗೆ ಒಂದು ಉಂಗುರವನ್ನು ಕೊಟ್ಟು, "ಇದೂ ಅಪರೂಪದ ವಜ್ರವಿರುವ ಉಂಗುರವೇ. ವಜ್ರ ವರ್ತಕರೂ ವಜ್ರ ನಿಪುಣರೂ ಅಣ್ಣ ತಮ್ಮಂದಿರಂಥವರು ತಾನೆ ? ನಿನ್ನ ಸಹಾಯಕ್ಕೆ ಬಹಳ ಕೃತಜ್ಞನಾಗಿದ್ದೇನೆ" ಎಂದನು.

"ಅಂತೂ ಬಹಳ ಬೆಲೆ ಬಾಳುವ ಅಪರೂಪದ ವಜ್ರವು ಯಾರ ಕೈಗೂ ಬೀಳದಂತೆ ಕಾಪಾಡಿಕೊಂಡೆ ಹೌದಾ ? ಹಾಗಿದ್ದರೆ ನಗರವನ್ನು ಬಿಟ್ಟು ಹೋಗುವ ಅಗತ್ಯವೇನು ಬಂತು ?" ಎಂದು ವಜ್ರ ನಿಪುಣನು ಕೇಳಿದನು.

ಮಣಿಭದ್ರನು ಬೇಸರದಿಂದ, "ಮತ್ತೇನು ಮಾಡಲಿ ? ರಾಜ, ಮಂತ್ರಿ, ಸೈನ್ಯಾಧ್ಯಕ್ಷರ ಅಪಾಯದಿಂದ ಹೇಗೆ ಹೊರಬಿದ್ದೆನೋ ! ಅದನ್ನೆಲ್ಲ ನನ್ನ ಹೆಂಡತಿಗೆ ಈಗತಾನೇ ವಿವರಿಸಿ ಹೇಳಿದೆ. ರಾಜಾಜ್ಞೆಗಳನ್ನು ಪಾಲಿಸುತ್ತ, ಅವನೊಂದಿಗೆ ಸಹಕರಿಸಬೇಕಾದ ಮಂತ್ರಿಯೂ, ಸೈನ್ಯಾಧ್ಯಕ್ಷನೂ ರಾಜನೊಂದಿಗೇ ಸ್ಪರ್ಧೆಗೆ ಬಿದ್ದಿದ್ದಾರೆ. ಅಂತಹ ರಾಜ್ಯದಲ್ಲಿ ಯಾವುದೋ ಒಂದು ದಿನ ಅಲ್ಲಕಲ್ಲೋಲವಾಗದೆ ಹೋಗದು. ಆಗ ನಮ್ಮ ಗತಿ ಏನಾದೀತು! ಅದಕ್ಕೇ ಇದನ್ನು ಬಿಟ್ಟು ಹೋಗುತ್ತಿದ್ದೇವೆ. ನೆಮ್ಮದಿಯಿಂದ ವ್ಯಾಪಾರ ಸಾಗಿಸಲು ಇದು ತಕ್ಕ ರಾಜ್ಯವಲ್ಲ" ಎಂದನು.






# ಬಲವಿಲ್ಲದ ರಾಕ್ಷಸ

ಕಥೆ ಕೇಳುತ್ತಾ ಶ್ರಮ ಕಳೆದುಕೊಂಡು ಹೊಸ ಉತ್ಸಾಹದಿಂದ ಧ್ಯೇಯ ಕಾರ್ಯವನ್ನು ನೆರವೇರಿಸಲು ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುವ ಶವವನ್ನು ಕೆಳಗಿಳಿಸಿ, ಹೆಗಲಲ್ಲಿ ಹೊತ್ತುಕೊಂಡು ಮೌನವಾಗಿ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವದೊಳಗಿನ ಬೇತಾಳವು ಶವದ ಬಾಯಿಯ ಮೂಲಕ ಮಾತಾಡಲು ತೊಡಗಿ, "ರಾಜಾ, ನೀನು ಪಡುವ ಇಷ್ಟೊಂದು ಶ್ರಮಕ್ಕೆ ಏನು ಕಾರಣವೆಂಬುದೇ ಅರ್ಥವಾಗುವುದಿಲ್ಲ. ಯಾವನಾದರೂ ಬೇಡದ ಕೆಲಸಮಾಡಿ, ಶಕ್ತಿ ಸಂಪನ್ನನಾದ ಯಾವ ಮುನಿಯಿಂದಲೋ ಏನೋ ಶಾಪವನ್ನು ಹೊಂದಿ, ಇಂತಹ ಇಕ್ಕಟ್ಟಿನಲ್ಲಿ ಸಿಕ್ಕಿ ತೊಳಲುವಿಯೇನು ? ನಿಜವಾದ ಮುನಿಗಳು ತಾತ್ಕಾಲಿಕವಾದ ಕೋಪದಿಂದ ಥಕ್ಕನೆ ಶಪಿಸಿದರೂ ಅದರಿಂದ ವಿಮೋಚನೆ ಹೊಂದುವ ಮಾರ್ಗವನ್ನು ಕೂಡಾ ಹೇಳುವುದುಂಟು. ಅಂತಹ ವಿಮೋಚನೆ ತಂದುಕೊಳ್ಳುವುದು ಶಾಪಗ್ರಸ್ತನ ಬುದ್ಧಿಬಲದ ಮೇಲೆಯೂ, ಅನುಕೂಲ ಪರಿಸ್ಥಿತಿಯ ಮೇಲೆಯೂ ಆಧಾರಗೊಂಡಿರುತ್ತದೆ. ಇದಕ್ಕೆ

## ಬೇತಾಳ ಕಥೆಗಳು?...



ಉದಾಹರಣೆಯಾಗಿ ಎಷ್ಟೋ ಶಾಸ್ತ್ರ ವಿದ್ಯೆಗಳನ್ನು ಕಲಿತ ರತ್ನದೀಪನೆಂಬ ಯುವಕನ ಕಥೆಯನ್ನು ಹೇಳುತ್ತೇನೆ. ಕಥೆ ಕೇಳುತ್ತಾ ಇದ್ದರೆ ನಡೆಯುವ ಶ್ರಮ ತಿಳಿಯುವುದಿಲ್ಲ" ಎಂದು ಹೇಳಿ ಕಥೆಯನ್ನು ಪ್ರಾರಂಭಿಸಿತು :

ರತ್ನದೀಪನೆಂಬ ಆ ಯುವಕನು ಕಾಶಿಗೆ ಹೋಗಿ ವಿದ್ಯಾಭ್ಯಾಸವನ್ನು ಪೂರ್ತಿ ಮಾಡಿಕೊಂಡು ದಕ್ಷಿಣಾಪಥದಲ್ಲಿರುವ ತನ್ನ ಊರಿಗೆ ಹಿಂದಿರುಗಿ ಬರುತ್ತಿದ್ದನು. ಕಾಡುದಾರಿಯಲ್ಲಿ ನಡೆಯುತ್ತಾ ಮಹಾರಣ್ಯದ ಮಧ್ಯದಲ್ಲಿ ಒಬ್ಬ ಮುನಿಯನ್ನು ನೋಡಿದನು. ತಪಸ್ಸಿನಲ್ಲಿ ಮಗ್ನನಾಗಿದ್ದ ಆ ಮುನಿಯನ್ನು ನೋಡುತ್ತಲೇ ರತ್ನದೀಪನಿಗೆ ಒಂದು ಆಲೋಚನೆ ಬಂದಿತು. ತಾನು ಕಾಶಿಯಲ್ಲಿ ಗುರುಗಳ ಹತ್ತಿರ ಎಷ್ಟೋ ಕಷ್ಟಪಟ್ಟು ಗುರುಸೇವೆಮಾಡಿ ಕಲಿತುಕೊಂಡ ಶಾಸ್ತ್ರಜ್ಞಾನಗಳಿಂದ ಸಾಧಿಸಲಾಗದ ಕಾರ್ಯಗಳು ತಪಃಶಕ್ತಿಯಿಂದ ಹಗುರಾಗಿ ಸಾಧಿಸಿ ಬಿಡಬಹುದಷ್ಟೆ? ಆದುದರಿಂದ ಈ ಮುನಿಗೆ ಕೆಲವು ದಿನ ಶ್ರದ್ಧೆವಹಿಸಿ ಶುಶ್ರೂಷೆ ಮಾಡುತ್ತ, ಆತನ ಮೂಲಕ ತಪಃಶಕ್ತಿಯನ್ನು ಗಳಿಸುವ ಮಾರ್ಗ ಕೂಡಾ ತಿಳಿದುಕೊಳ್ಳಬೇಕೆಂಬ ಮಹತ್ವಾಕಾಂಕ್ಷೆ ಅವನಿಗೆ ಉಂಟಾಯಿತು.

ಅಲ್ಲಿ ಮುನಿಗೆ ಶಿಷ್ಯರೆಂದು ಯಾರೂ ಇರಲಿಲ್ಲ. ಮರದ ಕೆಳಗೆ ಚಿಕ್ಕದೊಂದು ಕುಟೀರವಷ್ಟೇ ಇದೆ. ಒಂಟಿಯಾಗಿ ಅಲ್ಲಿಯೇ ವಾಸಿಸಿಕೊಂಡಿದ್ದಾನೆ. ಸಮೀಪದಲ್ಲಿ ಹರಿಯುವ ಬೆಟ್ಟದ ತೊರೆಯಲ್ಲಿ ಸ್ನಾನ ಮಾಡಿ ಬರುತ್ತಾನೆ ಆ ಮುನಿ.

ಈಗಲೂ ಮುನಿ ತಪಸ್ಸಿನಿಂದ ಎದ್ದು ಹೋಗಿ ಸ್ನಾನಮಾಡಿ ಬರುವವರೆಗೂ ಸುಮ್ಮನಿದ್ದ ರತ್ನದೀಪನು, ಮುನಿ ತನ್ನ ಕುಟೀರದ ಹತ್ತಿರ ಬಂದ ಕೂಡಲೇ ಅವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು. ಆಮೇಲೆ ತಾನು ಯಾರು- ಏನೆಂಬುದನ್ನೆಲ್ಲ ಹೇಳಿ, ತನ್ನ ಕೋರಿಕೆಯನ್ನೂ ಹೊರಡಿಸಿದನು. ಮುನಿ ಯಾವ ಮಾತೂ ಹೇಳದೆ, ಆದರಪೂರ್ವಕವಾದ ಕಿರುನಗೆಯನ್ನು ತೋರಿಸಿ ಸುಮ್ಮನಾದನು.

ಆ ದಿನದಿಂದ ರತ್ನದೀಪನು ಮುನಿಗೆ ಸೇವೆಗಳನ್ನು ಮಾಡುತ್ತ, ಆರು ತಿಂಗಳ ಕಾಲ ಕಳೆದನು. ಈ ಕಾಲದಲ್ಲಿ ಮುನಿ ಅವನೊಂದಿಗೆ ಒಂದು ಸಾರಿ ಕೂಡಾ ಮಾತಾಡಲಿಲ್ಲ. ಕುಟೀರದ ಮುಂದಿದ್ದ ಮರದ ಕೆಳಗೆ ಪದ್ಮಾಸನದಲ್ಲಿ ಕುಳಿತು ಧ್ಯಾನದಲ್ಲಿ ಮುಳುಗಿ ಹೋಗುವನು. ರತ್ನದೀಪನು ಎರಡು ಮೂರು ಬಾರಿ ತಪೋನಿಷ್ಠೆಗೆ ಬೇಕಾದ ಮಂತ್ರವನ್ನು ತನಗೆ ಉಪದೇಶಿಸುವಂತೆ ಕೇಳಿ ನೋಡಿದನು. ಮುನಿ ಕಿರುನಗೆ ಮಾತ್ರ ನಕ್ಕು ಯಾವ ಮಾತೂ ಹೇಳದೆ ಸುಮ್ಮನಿದ್ದು ಬಿಡುವನು.

ಕ್ರಮವಾಗಿ ರತ್ನದೀಪನಲ್ಲಿ ಸಹನೆ ಮೀರಿತು : ಭಕ್ತಿ ನಶಿಸಿತು. ಮುನಿಯ ಮೇಲೆ ದ್ವೇಷಭಾವ ಉಂಟಾಯಿತು. ಅವನು ಏನೋ ದೊಡ್ಡ ತಪ್ಪು ಮಾಡಿ, ರಾಜಭಟರ ಕಣ್ಣು ತಪ್ಪಿಸಿಕೊಂಡಿರಲು

ಈ ಮಹಾರಣ್ಯದಲ್ಲಿ ಸೇರಿ ಮುನಿ ವೇಷದಲ್ಲಿರುವ ಸಾಧಾರಣ ಮನುಷ್ಯನಾಗಿರಬೇಕೆಂಬ ಅನುಮಾನವು ರತ್ನದೀಪನಿಗಾಯಿತು.

ಒಂದು ದಿನ ಮುನಿ ಧ್ಯಾನದಲ್ಲಿರುವಾಗ, ರತ್ನದೀಪನು ಅವನ ಭುಜವನ್ನು ಹಿಡಿದುಕೊಂಡು ಗಟ್ಟಿಯಾಗಿ ಕುಲುಕಿ, "ನಾನು ಆರು ತಿಂಗಳಿಂದ ನಿಮ್ಮ ಸೇವೆ ಮಾಡುತ್ತಾ ಇದ್ದೇನೆ. ಒಂದು ದಿನವೂ ನನ್ನೊಡನೆ ತುಟಿ ಬಿಚ್ಚಿ ಮಾತಾಡಲಿಲ್ಲ. ಇದುವರೆಗೂ ನಿಮ್ಮ ತಪಃಶಕ್ತಿಗೆ ನಿದರ್ಶನವಾಗಿ ಯಾವ ಮಹತ್ವವೂ ಕಾಣಲಿಲ್ಲ. ನೀವು ನಿಜವಾಗಿ ತಪಸ್ವಿಗಳೇನು ? ಅಥವಾ ನಟನೆಯ ತಪಸ್ವಿಯೋ ?" ಎಂದು ಕೇಳಿದನು.

ಮುನಿಗೆ ಧ್ಯಾನ ಭಂಗವಾಗಿ, ರತ್ನದೀಪನನ್ನು ಕೋಪದ ಕಣ್ಣುಗಳಿಂದ ನೋಡಿ, "ಎಲೋ ಅಹಂಕಾರದವನೇ ! ನನ್ನ ತಪಃಶಕ್ತಿ ಯಾವ ರೀತಿಯದೆಂಬುದನ್ನು ಈಗಲೇ ನೋಡುವಿ ! ಕೇವಲ ಸ್ವಾರ್ಥ ಬುದ್ಧಿಯಿಂದ ನೀನು ನನ್ನ ಬಳಿಗೆ ಬಂದು ಸೇರಿರುವಿ. ಅದು ಮಾನವ ಸಹಜ ಗುಣ. ಅದನ್ನು ತಪ್ಪೆಂದು ಹೇಳಲಾರೆ. ಆದರೆ ಈಗ ನೀನು ಒಮ್ಮೆಗೇ ತೋರಿಸಿದ ದುಡುಂದುಡುಕು ಪ್ರವರ್ತನೆ ರಾಕ್ಷಸ ಸಹಜ ಗುಣ ! ಆದುದರಿಂದ ನೀನು ರಾಕ್ಷಸನೇ ಆಗಿಬಿಡು. ಆದರೆ ರಾಕ್ಷಸನ ಅಂತಃಶಕ್ತಿ ಮಾತ್ರ ನಿನಗಿರಲಾರದು. ಆ ರೂಪದಲ್ಲಿ ಏನಾದರೂ ಪುಣ್ಯ ಕಾರ್ಯಗಳನ್ನು ಮಾಡಿದರೆ ಮಾತ್ರ ನಿನಗೆ ಶಾಪ ವಿಮೋಚನೆಯಾಗಿ ಮತ್ತೆ ಮಾನವ ರೂಪವು ಬರುತ್ತದೆ. ನಿನ್ನ ಸಹನೆಗೇಡಿತನದ ಪ್ರವರ್ತನೆಗೆ ಇದುವೇ ತಕ್ಕ ಫಲ. ಹೋಗು !" ಎಂದನು.

ಮರುಕ್ಷಣದಲ್ಲೇ ರತ್ನದೀಪನು ಭಯಂಕರ ಶರೀರದ ರಾಕ್ಷಸನಾಗಿ ಮಾರ್ಪಟ್ಟು, ಆ ಮಹಾರಣ್ಯದೊಳಗಿನ ಮತ್ತೊಂದು ಪ್ರಾಂತಕ್ಕೆ ಆಕಾಶದಲ್ಲಿ ಹಾರಿಕೊಂಡು ಹೋದನು.



ಒಂದು ದಿನ ವೀರಸೇನನೆಂಬ ಮಹಾವೀರನೊಬ್ಬನು ದೇಶ ಸಂಚಾರ ಮಾಡುತ್ತ ಅರಣ್ಯ ಮಾರ್ಗದಲ್ಲಿ ಹೋಗುತ್ತಿದ್ದಾಗ, ರತ್ನದೀಪ ರಾಕ್ಷಸನು ಮರದ ಮೇಲಿನಿಂದ ಅವನ ಮುಂದೆ ಹಾರಿ, "ಆಹಾ ! ಬಹಳ ದಿನಗಳ ಮೇಲೆ ಸಿಕ್ಕಿದನು ! ಖಂಡಪುಷ್ಟಿಯಾದ ಮನುಷ್ಯ ! ಏನು ನನ್ನ ಅದೃಷ್ಟ !" ಎಂದನು.

ರಾಕ್ಷಸನನ್ನು ನೋಡಿ ವೀರಸೇನನು ಸ್ವಲ್ಪವೂ ಹೆದರದೆ, "ನೀನು ಎಂಥ ರಾಕ್ಷಸನೇ ಆಗಿರು, ನಾನೇನೂ ಹೆದರುವುದಿಲ್ಲ. ನಿನ್ನನ್ನು ಚೂರು ಚೂರು ಮಾಡಿ ಬಿಸುಡುತ್ತೇನೆ. ನಿನಗೆ ಬದುಕ ಬೇಕೆಂಬ ಆಸೆಯಿದ್ದರೆ ತಕ್ಕ ಎಚ್ಚರಿಕೆ ತೆಗೆದುಕೋ" ಎನ್ನುತ್ತ ಕತ್ತಿ ಹಿರಿದನು.

ರಾಕ್ಷಸನು ನಗಾಡಿ, "ನೀನು ನನ್ನ ಕಾಲಿನ ಉಗುರಿನಷ್ಟೂ ಇಲ್ಲ. ಆದರೂ ಮಹಾಧೈರ್ಯಶಾಲಿ ! ಅದನ್ನು ಮೆಚ್ಚುತ್ತೇನೆ. ನಾನು ಕಣ್ಣು



ಮುಚ್ಚಿ ಬಿಡಿಸುವುದರೊಳಗೆ ನನಗೆ ಎಟಕದ ಹಾಗೆ ಓಡುವಿಯಾದರೆ, ನಿನ್ನನ್ನು ಬಿಟ್ಟು ಬಿಡುತ್ತೇನೆ" ಎಂದನು.

"ಓಹೋ ! ನೀನು ನನ್ನನ್ನು ಬಿಡುವೆನೆಂದರೂ ನಾನು ನಿನ್ನನ್ನು ಬಿಡಲಾರೆ. ಏಕೆಂದರೆ ನಿನ್ನಂಥವನನ್ನು ಬದುಕಲು ಬಿಡುವುದು ಒಳ್ಳೆಯದಲ್ಲ." ಎಂದು ಕತ್ತಿಯನ್ನು ಕುಣಿಸಿ ಹುಂಕರಿಸಿದನು ವೀರಸೇನ.

ಆ ಉತ್ತರವನ್ನು ಕೇಳಿ ರಾಕ್ಷಸನು ಜರ್ರನೆ ಇಳಿದು ಸಪ್ಪಗಿನ ದನಿಯಿಂದ, "ನನ್ನ ಬೆದರಿಕೆಯ ಮಾತಿಗೆ ನೀನು ಹೆದರುವಿ ಅಂದುಕೊಂಡೆನು. ನನ್ನ ನಿಜ ಸಂಗತಿ ಹೇಳಿಬಿಡುತ್ತೇನೆ. ನನ್ನದು ಬರೀ ರಾಕ್ಷಸಾಕಾರವೇ ಹೊರತು ನನಗೆ ರಾಕ್ಷಸರಿಗಿರುವ ಯಾವ ವಿಧವಾದ ಬಲವೂ ಇಲ್ಲ. ಯಾರಾದರೂ ಹೇಡಿಗಳು ಸಿಕ್ಕಿದರೆ ಮಾತ್ರವೇ ನನ್ನ ಬದುಕು ಸಾಗುತ್ತದೆ. ಅದನ್ನೇ ಕಾದುಕೊಂಡಿದ್ದೇನೆ" ಎಂದನು.

ವೀರಸೇನನು ಆಶ್ಚರ್ಯದಿಂದ, "ಇಷ್ಟು ದೊಡ್ಡ ಭಯಂಕರ ರೂಪವಿರುವ ನಿನಗೆ ಬಲವೇ ಇಲ್ಲವೆಂದರೆ ಏನಿದು ? ಹಾಗೇಕೆ ?" ಎಂದನು.

"ಒಂದು ಕಾಲದಲ್ಲಿ ನಾನೂ ಮಾನವನೇ. ಒಬ್ಬ ಮುನಿಯ ಶಾಪದಿಂದಾಗಿ ಈ ರಾಕ್ಷಸರೂಪ ಬಂದಿತು. ನನ್ನಿಂದ ಮಾನವರಾರಿಗೂ ಹಾನಿಯಾಗದಿರಲಿಕ್ಕಾಗಿ ಮುನಿಗಳು ನನಗೆ ರಾಕ್ಷಸ ಶಕ್ತಿ ಇಲ್ಲದಂತೆ ಮಾಡಿದ್ದಾರೆ. ನಿನಗೆ ತಿಳಿದಂತೆ ಯಾರಾದರೂ ಅಂಜುಕುಳಿಗಳಿದ್ದರೆ ಹೇಳು" ಎಂದನು ರಾಕ್ಷಸ.

"ನಿನ್ನ ಹೊಟ್ಟೆಗೆ ಹೇಡಿಗಳ ಬರಬಂದಿತೇನು ? ಇಂಥಾ ರಾಕ್ಷಸನ ಸಂಗತಿಯನ್ನು ನಾನೆಲ್ಲಿಯೂ ಕೇಳಿದ್ದಿಲ್ಲ !" ಎಂದನು ವೀರಕೇಸರಿ.

"ಅಷ್ಟೇ ಮತ್ತೆ. ನಾನು ಈ ಅರಣ್ಯದಲ್ಲಿ ಯಾರ ಕಣ್ಣಿಗೆ ಬಿದ್ದರೂ, ಅವರು ಧೈರ್ಯದಿಂದ ನನಗೆ ಇದಿರು ತಿರುಗುತ್ತಾರೆ. ಮುನಿಯ ಶಾಪದ ಸಂಗತಿ ಅವರಿಗೆ ತಿಳಿದು ಹೋಯಿತೋ ಏನೋ?" ಎಂದನು ರಾಕ್ಷಸ ದೀನನಾಗಿ.

"ಅದೇನಿಲ್ಲ. ಧೈರ್ಯಶಾಲಿಗಳು ಮಾತ್ರವೇ ಅರಣ್ಯದಲ್ಲಿ ಅಡಿ ಇಡುತ್ತಾರೆ. ನಿನಗೆ ಹೇಡಿಗಳ ಅಗತ್ಯವಿರುವುದಾದರೆ ಮನುಷ್ಯರಿರುವ ಊರುಗಳಿಗೆ ಹೋಗಬೇಕು" ಎಂದು ವೀರಸೇನನು ಹೇಳಿದನು.

ರಾಕ್ಷಸನು ವೀರಸೇನನಿಗೆ ಕೃತಜ್ಞತೆ ಹೇಳಿ, ಅರಣ್ಯವನ್ನು ಬಿಟ್ಟು ಒಂದು ಗ್ರಾಮಕ್ಕೆ ಹೋಗಿ ಅಲ್ಲಿ ಇಳಿದನು. ಅಲ್ಲಿ ಸೋಮಯ್ಯನೆಂಬ ಮನುಷ್ಯನು ಅವನ ಕಣ್ಣಿಗೆ ಬಿದ್ದನು. ಆದರೆ ಸೋಮಯ್ಯ ಬೃಹದಾಕಾರದ ಭಯಂಕರ ರಾಕ್ಷಸನನ್ನು ನೋಡಿ ಸ್ವಲ್ಪವೂ ಹೆದರಲಿಲ್ಲ.

ತನ್ನನ್ನು ನೋಡಿ ಆಶ್ಚರ್ಯದಿಂದ ನಿಂತಿರುವ ಸೋಮಯ್ಯನ ಹತ್ತಿರ ಹೋಗಿ ರಾಕ್ಷಸನು, "ಏನೋ ಮನುಷ್ಯಾ, ನಾನೆಂದರೆ ನಿನಗೆ ಭಯವಾಗುವುದಿಲ್ಲವೆ ?" ಎಂದು ಕೇಳಿದನು.

“ನನಗೆ ಸಾವಿನ ಮೇಲೆ ಭಯವೇನೂ ಇಲ್ಲ. ಮೊದಲೇ ಹೊಟ್ಟೆಗಿಲ್ಲದೆ ಮೆಲ್ಲಮೆಲ್ಲ ಸತ್ತುಕೊಂಡೇ ಇದ್ದೇನೆ. ನೀನು ನೋವು ತಿಳಿಯದಂತೆ ಒಮ್ಮೆಗೇ ಕೊಂದರೆ ಸಂತೋಷವೇ.” ಎಂದನು ಸೋಮಯ್ಯ ಬೇಸರದಿಂದ.

“ಸಾವು ಅಂದರೆ ಈ ಊರಿನಲ್ಲಿ ಯಾರಿಗೆ ಭಯವಿದೆಯೋ ಅವರನ್ನು ನನಗೆ ತೋರಿಸು” ಎಂದನು ರಾಕ್ಷಸ.

“ಓ ಅಲ್ಲಿ ಕಾಣುವ ಮನೆಯಲ್ಲಿರುವ ಕುಶಾಲಯ್ಯನಿಗೆ ಸಾವು ಎಂದರೆ ಮಹಾಭಯ !” ಎಂದನು ಸೋಮಯ್ಯ.

ಕೂಡಲೇ ರಾಕ್ಷಸನು ಕುಶಾಲಯ್ಯನ ಮುಂದೆ ಎರಗಿದನು. ಆದರೆ ಕುಶಾಲಯ್ಯ ಕೂಡಾ ರಾಕ್ಷಸನನ್ನು ನೋಡಿ ಸ್ವಲ್ಪವೂ ಹೆದರಿದಂತೆ ಕಾಣಲಿಲ್ಲ.



“ಬದುಕಬೇಕೆಂಬ ಆಶೆಯಿಂದ ಎಷ್ಟೋ ಮದ್ದುಗಳನ್ನು ತಿನ್ನುತ್ತಿದ್ದೇನೆ. ಒಂದಾದರೂ ಉಪಯೋಗವಾಗಿಲ್ಲ. ಶರೀರ ಬಾಧೆ ದಿನದಿಂದ ದಿನಕ್ಕೆ ಹೆಚ್ಚುತ್ತಾ ಹೋಗುತ್ತಿದೆ. ನೀನು ನನ್ನನ್ನು ಒಂದೇ ಬಾಯಿಗೆ ನುಂಗಿ ಬಿಟ್ಟರೆ, ನನ್ನ ರೋಗದ ಬಾಧೆ ತೀರಿ ಹೋಗುತ್ತದೆ” ಎಂದನು ಕುಶಾಲಯ್ಯ.

ರಾಕ್ಷಸನು ದೊಡ್ಡದೊಂದು ಉಸಿರು ಬಿಟ್ಟು, “ನಿನಗೆ ತಿಳಿದ ಹಾಗೆ ಬದುಕಬೇಕೆಂಬ ಆಶೆ ಇರುವವರು ಯಾರೂ ಇಲ್ಲವೇನು ?” ಎಂದು ಕೇಳಿದನು.

“ನನಗೆ ವೈದ್ಯ ಚಿಕಿತ್ಸೆ ಮಾಡುವ ರಂಗಾಚಾರಿಗೆ ಬದುಕಿನ ಮೇಲೆ ಬಹಳ ಆಶೆ ಇದೆಯೆಂದು ನನ್ನ ನಂಬುಗೆ. ನನ್ನಿಂದ ಚೆನ್ನಾಗಿ ಹಣಕಿತ್ತುಕೊಳ್ಳಲು, ಅವನು ನನ್ನ ರೋಗವನ್ನು ಗುಣಪಡಿಸುವುದಿಲ್ಲವೆಂದು ನನ್ನ ಅನುಮಾನ” ಎಂದನು ಕುಶಾಲಯ್ಯ.

ರಾಕ್ಷಸನು ರಂಗಾಚಾರಿಯ ಮುಂದೆ ಹೋಗಿ ನಿಂತನು. ಅವನು ಕೂಡಾ ರಾಕ್ಷಸನನ್ನು ನೋಡಿ ಏನೂ ಹೆದರದೆ, “ನೋಡಪ್ಪಾ, ರಾಕ್ಷಸಾ, ನನಗೆ ಹೆಂಡತಿಯ ಮೇಲೆ ಪ್ರಾಣ. ಅವಳಿಗಾಗಿಯೇ ನಾನು ಕಷ್ಟಪಟ್ಟು ಸಂಪಾದಿಸುವುದು. ನಿನ್ನೆ ಅವಳು ಎಲ್ಲಾ ಹಣವನ್ನೂ ಕದ್ದುಕೊಂಡು ಅವಳ ತೌರಿಗೆ ಹೋಗಿ ಬಿಟ್ಟಳು, ಇನ್ನು ನನಗೆ ಬದುಕು ಏಕೆ ? ನೀನು ನನ್ನನ್ನು ನುಂಗಿ ನಿನ್ನ ಹಸಿವನ್ನು ತೀರಿಸಿಕೊಂಡು ಬಿಡು” ಎಂದನು.

ರಾಕ್ಷಸನು ನೀರಸಭಾವದಿಂದ, “ನನಗೆ ಅಂಥಾ ಶಕ್ತಿ ಇಲ್ಲವಪ್ಪಾ. ಅಂಜುಕುಳಿಗಳಾರಾದರೂ ನನ್ನನ್ನು ನೋಡಿ ಹೆದರಿದರೆ ಮಾತ್ರ ಅವರನ್ನು ನುಂಗಬೇಕೆಂದಿದ್ದೇನೆ. ಅಥವಾ ನನ್ನಿಂದ ಉಳಿದುಕೊಳ್ಳಲು ಯಾರಾದರೂ ನನಗೆ, ನಾನು ಹೇಳಿದ ಹಾಗೆ ಹೆದರಿ ದೈವ ಪೂಜೆ ಮಾಡಿದರೆ, ನನ್ನ ಕಾರಣದಿಂದ ದೈವಕ್ಕೆ ಪೂಜೆ ಸಂದ ಪುಣ್ಯದಿಂದ ನನ್ನ ಈ ರಾಕ್ಷಸ ಜನ್ಮ ಹೋಗಬೇಕು. ಆದರೆ ನನಗೆ ಒಬ್ಬ ಅಂಜುಕುಳಿ ಕೂಡಾ ಸಿಗಲಿಲ್ಲ” ಎಂದನು.



ಈ ಊರಿನಲ್ಲಿ ಮಹಾ ಜಿಪುಣ ಜಿಡ್ಡಯ್ಯ ತುಂಬಾ ಅಂಜುಕುಳಿ ಎಂದು ಹೇಳುತ್ತಾರೆ. ಅವನಿಗೆ ಜೀವಿತ ವೆಂದರೆ ಬೆಲ್ಲಕ್ಕಿಂತ ಸವಿ" ಎಂದನು ರಂಗಾಚಾರಿ.

ರಾಕ್ಷಸನು ಜಿಡ್ಡಯ್ಯನ ಮುಂದೆ ಹೋಗಿ ನಿಂತು, "ಸಿದ್ಧನಾಗು ! ನಿನ್ನನ್ನು ಹಿಡಿಯುತ್ತೇನೆ" ಎಂದನು. ಜಿಡ್ಡಯ್ಯ ರಾಕ್ಷಸನನ್ನು ನೋಡಿದ ಕೂಡಲೇ ಹೆದರಿ ಗಡಗಡ ನಡುಗ ತೊಡಗಿದನು.

"ನಿನ್ನನ್ನು ನಾನೇನೂ ಮಾಡಲಾರೆ. ನನಗಾಗಿ ನೀನೊಂದು ಪುಣ್ಯಕಾರ್ಯ ಮಾಡು. ನನ್ನ ಹೆಸರು ಹೇಳಿ ನಾಲ್ಕು ದಿನಗಳ ವರೆಗೆ ಅರ್ಚನೆ ಮಾಡಿಸು, ನನ್ನ ಹೆಸರು ರತ್ನದೀಪ ರಾಕ್ಷಸ" ಎಂದನು ರಾಕ್ಷಸ.

"ಅರ್ಚನೆ ಮಾಡಿಸಬೇಕಾದರೆ ಬಹಳ ಹಣ ಬೇಕು. ಹಣ ಖರ್ಚುಮಾಡಲು ನನ್ನಿಂದ ಸಾಧ್ಯವಿಲ್ಲ. ಆ ಕೆಲಸ ಆಗದು," ಎಂದನು ಜಿಡ್ಡಯ್ಯ.

"ಹಾಗಾದರೆ ನಿನ್ನನ್ನು ಹಿಡಿಯುತ್ತೇನೆ" ಎಂದನು ರಾಕ್ಷಸ. "ಹಿಡಿದರೆ ಹಿಡಿ, ನುಂಗಿದರೆ ನುಂಗು, ಹಣ ಮಾತ್ರ ಒಂದು ಕಾಸೂ ಖರ್ಚಾಗಬಾರದು. ನೀನು ನುಂಗಿದರೆ ನನ್ನ ಶವ ಸಂಸ್ಕಾರದ ಖರ್ಚು ಸಹಾ ಉಳಿಯುತ್ತದೆ" ಎಂದನು ಜಿಪುಣ ಜಿಡ್ಡಯ್ಯ. ಹಣ ಖರ್ಚು ಮಾಡುವ ವಿಷಯ ಬಂದಾಗ ಎಲ್ಲಿಲ್ಲದ ಸಾಹಸ ಬಂದು ಬಿಟ್ಟಿತ್ತು ಜಿಡ್ಡಯ್ಯನಿಗೆ.

"ಅಯ್ಯೋ ! ನನಗೆ ಈ ರಾಕ್ಷಸ ರೂಪದಿಂದ ವಿಮೋಚನೆಯೇ ಇಲ್ಲ !" ಎಂದುಕೊಂಡು ರಾಕ್ಷಸನು ಮತ್ತೊಂದು ಗ್ರಾಮಕ್ಕೆ ಹೋದನು.

ಅವನು ಆ ಊರಿನ ಮೇರೆಯನ್ನು ತಲಪುವಾಗ, ಅಲ್ಲಿ ಉತ್ಸಾಹದಿಂದ ಹಾಡುತ್ತ ಕುಣಿಯುತ್ತಲಿರುವ ಸೋಮಯ್ಯನನ್ನು ನೋಡಿದನು. ರಾಕ್ಷಸನು ಅವನ ಹತ್ತಿರ ಹೋಗಿ "ಈಗ ಇಷ್ಟು ಉತ್ಸಾಹದಲ್ಲಿರುವಿ ಏಕೆ ?" ಎಂದು ಕೇಳಿದನು.

ಸೋಮಯ್ಯನು ರಾಕ್ಷಸನನ್ನು ನೋಡಿದ ಕೂಡಲೇ ಗದಗದನೆ ನಡುಗುತ್ತ, "ನನ್ನನ್ನೇನೂ ಮಾಡದಿರು. ನನಗೆ ಇನ್ನೂ ಬಹು ಕಾಲ ಬದುಕಬೇಕೆಂದಿದೆ. ಕುಶಾಲಯ್ಯ ನನ್ನನ್ನು ದತ್ತಕ್ಕೆ ತೆಗೆದುಕೊಳ್ಳುತ್ತಾನಂತೆ. ತಾನು ಹೇಗೂ ಬಹಳ ಕಾಲ ಬದುಕಲಾರೆನೆಂದು ತಿಳಿದು ನನ್ನಂಥವನಿಗೆ ಉಪಕಾರ ಮಾಡಬೇಕೆಂದು ಅವನಿಗೆ ತೋರಿತಂತೆ. ಇದೆಲ್ಲವೂ ನಿನ್ನ ಪುಣ್ಯದಿಂದಲೇ" ಎಂದು ರಾಕ್ಷಸನಿಗೆ ಕೈಮುಗಿದನು.

ಏನು ಸಂಗತಿ ಎಂದು ತಿಳಿದುಕೊಳ್ಳಲು ರಾಕ್ಷಸನು ಕುಶಾಲಯ್ಯನ ಮನೆಗೆ ಹೋದನು. ಅವನನ್ನು ನೋಡಿದ ಕೂಡಲೇ ಕುಶಾಲಯ್ಯ ಹೆದರಿ ನಡುಗಿದನು. "ಅರೆ ! ನಿನಗೆ ಕೂಡಾ ಜೀವಿತದ ಮೇಲೆ ಆಶೆ ಬಂದ ಹಾಗಿದೆಯಲ್ಲಾ ?" ಎಂದನು ರಾಕ್ಷಸ.

"ಆ ವೈದ್ಯರಂಗಾಚಾರಿಗೆ ನೀನು ಏನು ಮಂತ್ರ ಹಾಕಿದೆಯೋ ಏನೋ ? ಇದೇ ಈಗ ಸ್ವಲ್ಪ ಮುಂಚೆ ಅವಸರವಸರವಾಗಿ ಅವನು ಇಲ್ಲಿಗೆ ಬಂದು ನನಗೊಂದು ಗುಳಿಗೆ ಕೊಟ್ಟನು, ಅದರಿಂದ ನನ್ನ ರೋಗ ಪೂರಾ ಕೈಯಿಂದೆತ್ತಿ ಬಿಸುಟಂತೆ ಹೊರಟು

ಹೋಯಿತು, ದಯಮಾಡಿ ನನ್ನನ್ನು ಸ್ವಲ್ಪ ಕಾಲ ಬದುಕಲಿಕ್ಕೆ ಬಿಟ್ಟುಬಿಡು" ಎಂದನು ಕುಶಾಲಪ್ಪ.

ರಾಕ್ಷಸನು ರಂಗಾಚಾರಿಯ ಬಳಿಗೆ ಹೋದನು. ಅವನಿಗೆ ಜೀವಿತದ ಮೇಲೆ ಆಶೆ ಉಂಟಾಗಿತ್ತು. ಕುಶಾಲಯ್ಯನಿಗೆ ಮದ್ದು ಕೊಟ್ಟು ಬರುವಾಗ ಅವನ ಹೆಂಡತಿ ಮನೆಗೆ ಹಿಂದಿರುಗಿ ಬಂದಿದ್ದಳು. ತೌರೂರಿಗೆಂದು ಹೊರಟವಳು ಅರ್ಧದಾರಿ ಹೋಗುವಾಗ ಅವಳಿಗೆ ಪಶ್ಚಾತ್ತಾಪವಾಯಿತಂತೆ. ಅವಳು ಹಿಂದಿರುಗಿ ಬಂದು ತನ್ನ ತಪ್ಪು ಕ್ಷಮಿಸಬೇಕೆಂದು ಬೇಡಿಕೊಳ್ಳುತ್ತ ಗಂಡನ ಪಾದಗಳ ಮೇಲೆ ಬಿದ್ದಿದ್ದಾಳೆ, ಆದರಿಂದ ರಂಗಾಚಾರಿಗೆ ಜೀವಿತದ ಮೇಲೆ ಅಪಾರ ಆಶೆ ಉಂಟಾಗಿತ್ತು.

ಈಗ ರಾಕ್ಷಸನಿಗೆ ಹೆದರುವವರು ಸಿಕ್ಕಿದರು. ಆದರೆ ಅವರೊಂದಿಗೆ ಏರ್ಪಟ್ಟ ಪರಿಚಯದ ಕಾರಣದಿಂದಾಗಿ ಅವರನ್ನು ಹಿಡಿದು ನುಂಗಿ ಹಸಿವೆ ತೀರಿಸಿಕೊಳ್ಳಲಿಕ್ಕೆ ಅವನಿಗೆ ಮನಸ್ಸು ಬರಲಿಲ್ಲ. ಅಲ್ಲಿಂದ ಅವನು ಮತ್ತೊಂದು ಸಾರಿ ಜಿಪುಣ ಜಿಡ್ಡಯ್ಯನನ್ನು ಮಾತಾಡಿಸಲು ಹೋಗಬೇಕೆಂದು ಹೊರಟನು. ಅಷ್ಟರೊಳಗೆ ಅವನ ಶರೀರವು ಕುಂಚಿತವಾಗಿ ಹೋಗಿ ಮೊದಲಿನ ರತ್ನದೀಪನಾಗಿ ಮಾರ್ಪಟ್ಟನು. ಅವನ ಶಾಪವಿಮೋಚನೆಯಾಗಿ ಹೋಗಿತ್ತು. ಬುದ್ಧಿಯೂ ತಿಳಿಯಾಗಿತ್ತು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ ಮುನಿಯ ಶಾಪದಿಂದ ರಾಕ್ಷಸನಾಗಿ ಮಾರ್ಪಟ್ಟ ರತ್ನದೀಪನು ಯಾವ ಪುಣ್ಯವನ್ನೂ ಮಾಡದೆಯೇ ತನ್ನ ರಾಕ್ಷಸ ರೂಪದಿಂದ ಹೇಗೆ ವಿಮೋಚನೆ ಹೊಂದಿದನು? ಈ ಸಂಶಯಕ್ಕೆ ತಕ್ಕ ಉತ್ತರ ತಿಳಿದು ಕೂಡಾ ಹೇಳದೇ ಹೋದರೆ ನಿನ್ನ ತಲೆ ಪುಡಿಪುಡಿಯಾಗುತ್ತದೆ. ನೆನಪಿರಲಿ!" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ರಾಕ್ಷಸನು ಪುಣ್ಯ ಮಾಡಲಿಲ್ಲವೆಂಬುದು ಸರಿಯಲ್ಲ. ಬೇಕಾಗಿದ್ದರೆ ಅವನು ಅಂಜುಕುಳಿಗಳಾಗಿ ಮಾರ್ಪಟ್ಟವರನ್ನು ಹಿಡಿದು ನುಂಗಬಹುದಿತ್ತು. ಅವನು ಹಾಗೆ ಮಾಡಲಿಲ್ಲ. ಎಷ್ಟೋ ದೈವ ದೇವರುಗಳನ್ನು ಪೂಜಿಸಿದರೂ ತುಂಬಿದ ಮೂರು ಪ್ರಾಣಗಳನ್ನು ಉಳಿಸಿದ ಪುಣ್ಯಕ್ಕೆ ಸರಿಬಾರವು. ಅದು ಅವನು ಮಾಡಿದ ದೊಡ್ಡ ಪುಣ್ಯವೇ ಆಯಿತು. ಆ ಕಾರಣದಿಂದಲೇ ರತ್ನದೀಪನ ರಾಕ್ಷಸ ರೂಪ ಹೋಗಿ ಯಥಾರೂಪ ಬಂದಿತು"

ಈ ರೀತಿಯಾಗಿ ರಾಜನಿಗೆ ಮೌನ ಭಂಗವಾದ ಕೂಡಲೇ ಬೇತಾಳವು ಎಂದಿನಂತೆ ಶವದೊಂದಿಗೇ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.



# ಕಲಾ ಪೋಷಣೆ

ಗೀವರ ಜಮೀನ್ದಾರನಿಗೆ ಕವಿಗಳೆಂದರೆ, ಕಲಾಕಾರರೆಂದರೆ ಸ್ವಲ್ಪವೂ ಹಿಡಿಸುತ್ತಿದ್ದಿಲ್ಲ. ಯಾರಾದರೂ ಕವಿತಾ ವಾಚನ ಮಾಡಿದರೆ ಆತನು ಕಿವಿಗಳನ್ನು ಮುಚ್ಚಿಕೊಳ್ಳುತ್ತಿದ್ದನು. ಕವಿಯೆಂದು ಹೇಳಿಕೊಳ್ಳುವವರನ್ನೆಲ್ಲಾ ಖೈದಿನಲ್ಲಿಡಬೇಕೆಂದು ಹೇಳಿಕೊಳ್ಳುವನು ಆ ಜಮೀನ್ದಾರ.

ಜಮೀನ್ದಾರನ ಈ ವಿಪರೀತ ವೈಖರಿಯಿಂದ ಇತರ ಜಮೀನ್ದಾರರಲ್ಲಿ ಇವನು ಅಲ್ಪದವನಾಗುವನೇನೋ ಎಂದು ದಿವಾನನಿಗೆ ಸಂಕಟವಾಗಿದ್ದಿತು.

ಒಂದು ದಿನ ಜಮೀನ್ದಾರನು ದಿವಾನನೊಂದಿಗೆ, ಒಬ್ಬ ಒಳ್ಳೆಯ ಚಿತ್ರಕಾರನನ್ನು ನೋಡಿ ತನ್ನ ಬಳಿಗೆ ಕಳುಹಿಸಬೇಕೆಂದು ಹೇಳಿದನು.

ಜಮೀನ್ದಾರನಲ್ಲಿ ಬಂದ ಮಾರ್ಪಾಟನ್ನು ನೋಡಿ ದಿವಾನನಿಗೆ ಬಹಳ ಸಂತೋಷವಾಯಿತು. ಅವನು ಹೆಸರಾಂತ ಒಬ್ಬ ಚಿತ್ರಕಾರನನ್ನು ಕರೆತಂದು ಜಮೀನ್ದಾರನ ಬಳಿಗೆ ಕಳುಹಿಸುತ್ತ, "ನಮ್ಮ ಜಮೀನ್ದಾರರ ಬಳಿಗೆ ಹೋಗುವ ಮೊತ್ತ ಮೊದಲನೇ ಚಿತ್ರಕಾರ ನೀನೇ. ಅವರನ್ನು ಮೆಚ್ಚಿಸುವ ಹಾಗೆ ಮಾಡುವ ಸಾಮರ್ಥ್ಯ ನಿನ್ನ ಕೈ ಚಳಕದಲ್ಲಿದೆ" ಎಂದನು.

ಒಳಗೆ ಹೋದ ಚಿತ್ರಕಾರನು ಒಂದು ಗಂಟೆಯ ಮೇಲೆ ಹಿಂದಿರುಗಿ ಬಂದು ದಿವಾನನೊಂದಿಗೆ, "ನಿಮ್ಮ ಜಮೀನ್ದಾರರಿಗೆ ಕಲಾಪೋಷಣೆ ತಿಳಿಯದೆಂಬುವರು ಶುದ್ಧ ಪಾಮರರು. ಈ ಒಂದು ಗಂಟೆ ಹೊತ್ತೂ ಅವರು ನನ್ನಿಂದ ಎಂದಿನಿಂದಲೋ ಬೂಜು ಹಿಡಿದಿದ್ದ ತಮ್ಮ ಪೂರ್ವಿಕರ ಚಿತ್ರಗಳನ್ನೆಲ್ಲ ಹತ್ತಿರವಿದ್ದು ತಿಕ್ಕಿ ಒರೆಸಿ ಸರಿ ಮಾಡಿಸಿದರು. ಅದಕ್ಕೆ ಪಾರಿತೋಷಿಕವನ್ನೂ ಕೊಟ್ಟರು. ಬಹಳ ದೊಡ್ಡ ಪಾರಿತೋಷಿಕ. ಹತ್ತು ರೂಪಾಯಿ! ಒಂದೆರಡಲ್ಲ!" ಎಂದನು.

ಇದನ್ನು ಕೇಳಿ ದಿವಾನನಿಗೆ ಏನು ಹೇಳಲೂ ತೋರಲಿಲ್ಲ.





# ಲೋಕರೀತಿ

ಒಂದು ಊರಿನಲ್ಲಿ ಧರ್ಮಯ್ಯನೆಂಬವನು ತುಂಬಾ ಕಷ್ಟಜೀವಿಯಾಗಿ ಬಾಳುತ್ತಿದ್ದನು. ಕೂಳೋ ಗಂಜಿಯೋ ಕುಡಿಯುತ್ತಾ ಗುಟ್ಟಾಗಿ ಸಂಸಾರವನ್ನು ಈಜಿಕೊಂಡು ಸಾಗುತ್ತಿದ್ದನು.

ಅವನ ಸಂಸಾರವೆಂದರೆ ಕುಚೇಲ ಕುಟುಂಬವೇ. ತನ್ನ ಬಡತನದಿಂದ ಮಕ್ಕಳನ್ನು ಪೋಷಿಸಲಾಗದೆ ಹೇಗೋ ಬೊಟ್ಟು ಬೊಟ್ಟಾಗಿ ನೀರೆರೆಯುತ್ತ, ಪೇಚಾಟದ ಜೀವನವಾಗಿತ್ತು ಅವನದು. ಅದಕ್ಕೆ ಜತೆಯಾಗಿ ಅವನಿಗೆ ಹುಟ್ಟಿದ ಹಿರಿಯ ಮಕ್ಕಳು ನಾಲ್ವರೂ ಹೆಣ್ಣು ಮಕ್ಕಳಾದುದರಿಂದ, ಗಂಡು ಮಕ್ಕಳು ಬೆಳೆದು ಕೈಗೆ ಬರುವುದರೊಳಗೆ, ಅವರು ಮದುವೆಯ ವಯಸ್ಸಿಗೆ ಬಂದು ಬಿಟ್ಟರು.

ಧರ್ಮಯ್ಯನು ಮಗಳಂದಿರಿಗೆ ಮದುವೆ ಮಾಡುವುದೆಂದರೆ ತಲೆಮೀರಿದ ಕಾರ್ಯವಾಗಿತ್ತು. ಅವನ ಹೆಂಡತಿಯಾದ ಪಾರ್ವತಮ್ಮ, ಅವನು ಕೆಲಸದಿಂದ ಮನೆಗೆ ಬಂದ ಕೂಡಲೇ ಮಗಳಂದಿರ ಮದುವೆಯನ್ನು ಕುರಿತು ಪ್ರಸ್ತಾಪ ಮಾಡುತ್ತಲೇ ಇದ್ದಳು. ಅವಳಿಗೆ ಹೆಣ್ಣು ಮಕ್ಕಳದೇ ಚಿಂತೆ. ಧರ್ಮಯ್ಯ ಹೆಂಡತಿಯ ಮುಖವನ್ನು ಅಸಹಾಯತೆಯಿಂದ ಸುಮ್ಮನೆ ನೋಡುವನು. ಏನು ಹೇಳಲೂ ಅವನಿಗೆ ತೋರುತ್ತಿದ್ದಿಲ್ಲ.

ಅವನ ಮಗಂದಿರು ಅಕ್ಕಂದಿರ ಮದುವೆಗೆ ಹಣ ಸೇರಿಸುತ್ತೇವೆಂಬ ಉಮೇದಿನಿಂದ ತಾವು ಕೂಡಾ ತಂದೆಯೊಂದಿಗೆ ಕಾಯಕಷ್ಟ ಮಾಡಲು ಸಿದ್ಧರಾದರು. ಧರ್ಮಯ್ಯನು ಇನ್ನೂ ಬಾಲ್ಯವನ್ನು ಕಳೆಯದಿರುವ ನಾಲ್ವರು ಗಂಡು ಮಕ್ಕಳನ್ನೂ ಕನಿಕರದಿಂದ ನೋಡಿ, ಬೇಡಬೇಡವೆಂದು ತಡೆದನು. ಅವರು ಕೇಳದೆ ತಂದೆಯ ಜತೆಯಲ್ಲಿ ಕೂಲಿಕೆಲಸಕ್ಕೆ ಹೊರಡದೆ ಬಿಡಲಿಲ್ಲ. ಅಭ್ಯಾಸವಿಲ್ಲದ ಮಕ್ಕಳು ಕಷ್ಟಪಡುವುದನ್ನು ನೋಡಿ ಧರ್ಮಯ್ಯನಿಗೆ ಸಂಕಟವಾಗುತ್ತಿತ್ತು.

ಧರ್ಮಯ್ಯನ ಮನೆಯ ಹಿಂದೆ ಬೇಲಿಯ ಬದಿಯಲ್ಲಿರುವ ಬೇವಿನ ಮರವನ್ನಾಶ್ರಯಿಸಿಕೊಂಡು, ಗಂಡ ಹೆಂಡಿರಾದ ಗೃಹದೇವತೆಗಳ ಜೋಡಿಯೊಂದಿತ್ತು. ಒಂದು ದಿನ ಗಂಡು ದೇವನು ಹೆಣ್ಣು ದೇವತೆಯೊಂದಿಗೆ, "ನಾವು ಎಷ್ಟೋ ಕಾಲದಿಂದ ಈ ಗೃಹವನ್ನೂ, ಈ ಮರವನ್ನೂ. ಆಶ್ರಯಿಸಿಕೊಂಡಿರುವೆವಷ್ಟೆ ? ಆದರೂ ಅತ್ಯಂತ ಬಡತನದಲ್ಲಿರುವ ಈ ಧರ್ಮಯ್ಯನಿಗೆ ನಾವು ಯಾವ ಸಹಾಯವನ್ನೂ

ಬಿ. ಎ. ರಾವ್



ಮಾಡಲಿಲ್ಲ. ಏನಾದರೂ ಮಾಡಿದರೆ ಒಳ್ಳೆಯ ದೆನಿಸುತ್ತದೆ. ಏನೆನ್ನುವಿ ?" ಎಂದು ಕೇಳಿದನು.

ಆ ಮಾತು ಕೇಳಿ ಹೆಣ್ಣು ದೇವತೆ ಕರುಣೆಗೊಂಡು, "ಹೌದೌದು. ಏನಾದರೂ ಮಾಡಿದರೇನೇ ಒಳ್ಳೇದು. ಒಂದು ಕಾಲದಲ್ಲಿ ಇವರದು ಸ್ಥಿತಿವಂತ ಸಂಸಾರ ವಾಗಿತ್ತು. ಪರಿಸ್ಥಿತಿಗಳು ಪ್ರತಿಕೂಲವಾಗಿ ಪಾಪ, ಈಗ ಬಡತನವನ್ನು ಅನುಭವಿಸುತ್ತಿದ್ದಾರೆ. ಈಗ ಏನು ಸಹಾಯ ಮಾಡಿದರೆ ಚೆನ್ನಾಗಿರುತ್ತದೆ ?" ಎಂದು ಕೇಳಿದಳು.

"ಸ್ವಲ್ಪ ಹಣ ತಂದು ಧರ್ಮಯ್ಯನ ಕಣ್ಣಿಗೆ ಬೀಳುವ ಹಾಗೆ ಮಾಡೋಣ. ಅದರಿಂದ ಅವನ ಕಷ್ಟಗಳೆಲ್ಲವೂ ತೀರಿ ಹೋಗುತ್ತವೆ. ಯಾವ ಚಿಂತೆಯೂ ಇಲ್ಲದೆ ಹೆಣ್ಣು ಮಕ್ಕಳಿಗೆ ಮದುವೆ ಮಾಡುತ್ತಾನೆ" ಎಂದನು ಗಂಡು ದೇವ.

ಅದೇ ಒಳ್ಳೆಯದೆಂದಳು ಹೆಣ್ಣು ದೇವತೆ. ಇಬ್ಬರೂ ಕೂಡಿ ಒಂದು ಹಣದ ಗಂಟನ್ನು ತಂದು, ಧರ್ಮಯ್ಯನ ಮನೆಯ ಹಿಂದಿರುವ ಬಾವಿಯ ಹತ್ತಿರ ಆ ಹಣದ ಮೂಟೆಯನ್ನು ಇಟ್ಟು ಮಾಯವಾಗಿ ಹೋದರು.

ಬೆಳಿಗ್ಗೆ ಎದ್ದು ಬಾವಿ ಕಟ್ಟೆಗೆ ಬಂದ ಧರ್ಮಯ್ಯ ಆ ಹಣದ ಮೂಟೆಯನ್ನು ನೋಡಿ, ಅದರ ಬಾಯಿಗೆ ಕಟ್ಟಿದ್ದ ದಾರವನ್ನು ಬಿಚ್ಚಿದನು. ಅದರಲ್ಲಿರುವುದನ್ನು ನೋಡಿ ಅವನ ಕಣ್ಣುಗಳು ಕೋರೈಸಿ ಹೋದುವು. ಕಣ್ಣುಗಳನ್ನು ತಿಕ್ಕಿತಿಕ್ಕಿ ನೋಡಿದನು. ಆನಂದದಿಂದ ಗಟ್ಟಿಯಾಗಿ ಕೂಗಿದನು. ಅದನ್ನು ಕೇಳಿ ಮನೆ ಯಲ್ಲಿದ್ದವರೆಲ್ಲಾ ಅಲ್ಲಿಗೆ ಓಡಿಬಂದರು.

ಎಲ್ಲರ ಕಣ್ಣುಗಳೂ ಹಣದ ಮೂಟೆಯ ಮೇಲೆ ಕೇಂದ್ರೀಕೃತವಾಯಿತು. ಮೊದಲು ಧರ್ಮಯ್ಯನ ದೊಡ್ಡ ಮಗ, ಹೆಣ್ಣು ಮಕ್ಕಳ ತರುವಾಯ ಹುಟ್ಟಿದವನು ತಂದೆಯೊಂದಿಗೆ, "ಅಪ್ಪಾ, ಈ ಹಣ ದಿಂದ ನಾವು ದೊಡ್ಡದೊಂದು ಒಳ್ಳೆಯ ವ್ಯಾಪಾರ ವನ್ನು ಪ್ರಾರಂಭಿಸಿಬಿಡೋಣ. ನಮ್ಮ ದಾರಿದ್ರ್ಯವು ಹಾರಿ ಹೋಗುತ್ತದೆ" ಎಂದನು.

ಉಳಿದ ಮೂವರು ಮಗಂದಿರೂ ಅಣ್ಣನನ್ನು ಕೋಪದಿಂದ ನೋಡುತ್ತ, "ಅದೆಲ್ಲಾ ಏನೂ ಬೇಡ. ಸಾಮಾನು ತೆಗೆದುಕೊಳ್ಳಲಿಕ್ಕೇ ಇದ್ದ ಹಣವೆಲ್ಲಾ ಖರ್ಚಾಗಿ ಹೋಗುತ್ತೆ. ಈ ಹಣದಿಂದ ಸ್ವಲ್ಪ ತೆಗೆದು ಮೊದಲು ನಮಗೆಲ್ಲಾ ಒಳ್ಳೊಳ್ಳೆಯ ದುಸ್ತು ಗಳನ್ನು ಹೊಲಿಸಬೇಕು. ಉಳಿದ ಹಣದಿಂದ ಯಾರಾದರೂ ಗುರುಗಳನ್ನು ಇಟ್ಟುಕೊಂಡು ಚೆನ್ನಾಗಿ ಓದಿಕೊಳ್ಳುತ್ತೇವೆ. ಅಪ್ಪಾ, ಓದು ಬರೆಹ ಕಲಿತರೆ ದೊಡ್ಡ ಮನುಷ್ಯರ ಹಾಗೆ ಬದುಕ ಬಹುದು" ಎಂದರು.

ಮಗಂದಿರು ಹೀಗೆ ಹೇಳುವುದನ್ನು ಕೇಳಿ, ಧರ್ಮಯ್ಯನ ಹೆಂಡತಿ, "ಸುಮ್ಮನಿರೊ, ಹುಚ್ಚು ಹುಡುಗರಾ !" ಎಂದು ಅವರ ಮೇಲೆ ರೇಗಿಬಿದ್ದು, "ನನಗೆ ಎಷ್ಟೋ ದಿನಗಳಿಂದ ಚಿನ್ನದ ನಗಗಳು

ಬೇಕೆಂದು ಆಶೆಯಿದೆ ಗೊತ್ತಾ ? ಒಂದೇ ಒಂದು ಚಿನ್ನದ ಗೀಟು ನನಗಿದೆಯೇ ? ದಿನಾ ಬಿಡದ ದರಿದ್ರ ದಿಂದ ಉಸಿರೆತ್ತದೆ ಸೈಸಿಕೊಂಡಿದ್ದೆ. ಈ ಹಣದಿಂದ ಮೊದಲು ಕೆಲವು ನಗಗಳನ್ನು ಮಾಡಿಸಲೇ ಬೇಕು" ಎಂದಳು ಪಟ್ಟು ಹಿಡಿದ ಹಾಗೆ.

ಧರ್ಮಯ್ಯ ಎಲ್ಲರನ್ನೂ ಸುಮ್ಮನಿರುವಂತೆ ಕೈಯಿಂದ ತಡೆದು, "ಈ ಹಣದಿಂದ ಮೊದಲು ಒಳ್ಳೆಯ ಮನೆ ಕಟ್ಟಿಸೋಣ. ಆಮೇಲೆ ಸ್ವಲ್ಪ ಗದ್ದೆ ಕೊಂಡುಕೊಳ್ಳೋಣ. ಆಗಲೇ ನಮಗೆ ಊರಿನಲ್ಲಿ ಹತ್ತು ಮಂದಿಯ ಮುಂದೆ ಮರ್ಯಾದೆ ಬರುತ್ತದೆ. ಆದುದರಿಂದ ನೀವಾರೂ ಈ ಹಣದ ಗೊಡವೆಗೆ ಈಗ ಬಾಯಿ ಹಾಕಬೇಡಿ" ಎಂದನು.

ಸ್ವಲ್ಪ ದೂರದಲ್ಲಿದ್ದು ಇದೆಲ್ಲವನ್ನೂ ನೋಡು ತ್ತಿದ್ದ ಮದುವೆಯ ವಯಸ್ಸಿಗೆ ಬಂದ ಧರ್ಮಯ್ಯನ ಹೆಣ್ಣು ಮಕ್ಕಳು ಮಾತ್ರ ಯಾವ ಆಶೆಯನ್ನೂ ವ್ಯಕ್ತ ಪಡಿಸದೆ ಸುಮ್ಮನಿದ್ದರು. ಅವರ ಮನಸ್ಸಿನೊಳಗೆ ಮಾತ್ರ ತಮ್ಮ ಮದುವೆಯ ವಿಚಾರಭಾರ.

ಬೇವಿನ ಮರದ ಮೇಲಿದ್ದು ಇದನ್ನೆಲ್ಲ ನೋಡು ತ್ತಿರುವ ಗೃಹದೇವತೆಗಳಿಗೆ, ಧರ್ಮಯ್ಯನೂ, ಅವನ ಹೆಂಡತಿಯೂ, ಗಂಡು ಮಕ್ಕಳೂ ಹಣದ ಮೂಟೆ ಯನ್ನು ನೋಡಿ ಪ್ರವರ್ತಿಸಿದ ರೀತಿ ಆಶ್ಚರ್ಯ ವನ್ನುಂಟುಮಾಡಿತು. ಅವುಗಳು ಅಂದುಕೊಂಡ ದ್ದೊಂದಾದರೆ ಆದುದು ಬೇರೆಯಾಗಿತ್ತು !

ಗಂಡುದೇವ ಹೆಣ್ಣು ದೇವತೆಯೊಂದಿಗೆ, "ನೋಡಿ ದಿಯಾ ಇವರ ಆಶೆಗಳ ರೀತಿಯನ್ನು ! ಬೆಳೆದ ಹೆಣ್ಣು ಮಕ್ಕಳ ಮದುವೆಯ ಸಂಗತಿಯನ್ನೇ ಇನ್ನೂ ಯಾರೂ ಎತ್ತಲಿಲ್ಲ. ಎಲ್ಲರಿಗೂ ತಮ್ಮ ತಮ್ಮ ಕೋರಿಕೆಗಳನ್ನು ತೀರಿಸಿಕೊಳ್ಳುವುದೇ ಮುಖ್ಯವಾಗಿದೆ. ಕಡೆಗೆ ಹೆತ್ತ ತಾಯಿಕೂಡಾ ಮಗಳಂದಿರ ಮೇಲಿನ ತನ್ನ ಬಾಧ್ಯತೆ ಮರೆತು, ನಗಗಳ ವ್ಯಾಮೋಹದಲ್ಲಿ ಬಿದ್ದುಬಿಟ್ಟಿದ್ದಾಳೆ ! ಇದೇ ಲೋಕದ ರೀತಿ ಎಂದಾಯಿತು !" ಎಂದನು.

ಅದಕ್ಕೆ ಹೆಣ್ಣು ದೇವತೆ ಮುಖ ಬಾಡಿಸಿಕೊಂಡು, "ಹಾಗೆಂತಲೇ ಕಾಣುತ್ತೆ. ಇದೆಲ್ಲಾ ಹಣದ ಮಹಿಮೆ



ಈ ಹಣವೇ ಇಲ್ಲದಿದ್ದಾಗ ಎಲ್ಲರೂ ಹೆಣ್ಣು ಮಕ್ಕಳ ಕುರಿತೇ ಆಲೋಚಿಸಿಕೊಂಡಿದ್ದರು. ಅದೊಂದೇ ಅವರೆಲ್ಲರ ಉಸಿರಾಗಿರುವ ಹಾಗಿತ್ತು. ಹಣದ ಗಂಟು ಕಣ್ಣಿಗೆ ಬಿದ್ದ ಕೂಡಲೇ ಆ ಮಾತೇ ಮರೆತು ಹೋಗಿ, ಯಾರ ಸ್ವಾರ್ಥವೋ ಅದನ್ನು ಸಾಧಿಸಿ ಕೊಳ್ಳಲು ದುಂಬಾಲು ಬೀಳುತ್ತಿದ್ದಾರೆ. ಇರು, ಈಗ ನಾನೊಂದು ತಮಾಷೆ ಮಾಡುತ್ತೇನೆ, ನೋಡು" ಎಂದಳು.

ಇಷ್ಟರೊಳಗೆ ಹಣದ ಮೂಟೆಯ ಹತ್ತಿರ ಧರ್ಮಯ್ಯನ ಕುಟುಂಬವು ತಮ್ಮ ತಮ್ಮ ಮಾತಿನಂತೆಯೇ ನಡೆಯಬೇಕೆಂದು ಜೋರಿನಿಂದ ವಾದ ವಿವಾದ ಮಾಡಿಕೊಂಡಿದ್ದರು.

ಕಡೆಗೆ ಆ ಮೂಟೆಯಲ್ಲಿರುವ ನಾಣ್ಯಗಳೆಲ್ಲವೂ ಚಿಕ್ಕ ಚಿಕ್ಕ ಕಲ್ಲುಗಳಾಗಿರುವುದನ್ನು ಅವರು ನೋಡಿ "ಅಯ್ಯೋ!" ಎಂದು ಬೆರಗಾಗಿ ಕೂಗಿಕೊಂಡು ಹಾರಿಬಿದ್ದರು.

ಧರ್ಮಯ್ಯನ ಹೆಂಡತಿ, ಅಳುಗೊರಲಿನಿಂದ, "ಅಯ್ಯೋ ಕರ್ಮವೇ! ಎಲ್ಲಾ ಹಣದ ಹಾಗೇ ಕಂಡಿತಲ್ಲಾ! ಎಂಥಾ ಭ್ರಾಂತಿ ಬಡೆಯಿತೋ ನಮಗೆ! ಈ ಕಲ್ಲು ತುಂಬಿದ ಮೂಟೇನ ಯಾವ ಮಂತ್ರವಾದಿಯೋ ಇಲ್ಲಿ ತಂದಿಟ್ಟು ನಮ್ಮನ್ನು ಕುಣಿಸಲಿಕ್ಕೆ ನೋಡಿದನೋ ಏನೋ?" ಎಂದಳು.

ಎಲ್ಲರೂ ನಿರಾಶೆಯಿಂದ ತಲೆಯನ್ನು ನೇತಾಡಿಸಿಕೊಂಡರು. ಮೊದಲು ಧರ್ಮಯ್ಯನ ಹೆಂಡತಿ ಸ್ವಲ್ಪ ಸಮಾಧಾನಕ್ಕೆ ಬಂದು, "ನೋಡಿದಿರಾ! ಮೊದಲು ನಾವು ಇದನ್ನು ಹಣಾ ಅಂದುಕೊಂಡು ಭ್ರಮೆಗೆ ಬಿದ್ದು ನಮ್ಮ ನಮ್ಮ ಆಶೆ ತೀರಿಸಿಕೊಳ್ಳಲಿಕ್ಕೆ ತಕರಾರು ಪ್ರಾರಂಭಿಸಿದೆವು. ಕಣ್ಣೆದಿರಿನಲ್ಲೇ ಮದುವೆಗೆ ಬೆಳೆದುನಿಂತ ಹೆಣ್ಣು ಮಕ್ಕಳಿದ್ದಾರಷ್ಟೆ? ಒಬ್ಬರಿಗಾದರೂ ಅವರ ನೆನಪೇ ಬರಲಿಲ್ಲ." ಎಂದಳು ವಿಚಾರದಿಂದ.

ಧರ್ಮಯ್ಯ ತಗ್ಗಿಸಿದ ತಲೆಯನ್ನು ಎತ್ತಲಾಗದೆ, "ಹೌದು. ಎಲ್ಲಕ್ಕಿಂತ ಮುಖ್ಯವಾದ ಆ ಮಾತೇ ಮರೆತುಬಿಟ್ಟೆನು" ಎಂದನು.

ಧರ್ಮಯ್ಯನ ಮಗಂದಿರು ನಾಚಿಕೊಳ್ಳುತ್ತ, ತಾಯಿಯೊಂದಿಗೆ, "ಅಮ್ಮಾ, ಚಿಂತೆಬಿಡು. ಹೇಗಾದರೂ ಕಷ್ಟಪಟ್ಟು ಕೆಲಸಮಾಡಿ ಹಣಸೇರಿಸಿ ಅಕ್ಕಂದಿರ ಮದುವೆ ನಾವು ಮಾಡಿಸುತ್ತೇವೆ. ಈಗ ನಡೆದುದೆಲ್ಲಾ ಮರೆತುಬಿಡೋಣ" ಎಂದರು.

ಬೇವಿನ ಮರದ ಮೇಲಿದ್ದು ಇದನ್ನೆಲ್ಲಾ ಗಮನಿಸಿಕೊಂಡಿದ್ದ ಗೃಹದೇವತೆಗಳಿಗೆ ಧರ್ಮಯ್ಯನ ಕುಟುಂಬವು ವಿವಾದಗಳನ್ನು ಬಿಟ್ಟು ಮತ್ತೆ ಒಂದಾದುದನ್ನು ನೋಡಿ ಸಂತೋಷಪಟ್ಟು, ಅವರ ಮೇಲೆ ಮತ್ತೆ ಅನುಗ್ರಹ ತೋರಿಸಿದುವು.





# ಎಚ್ಚರಿಕೆಯ ಮರ್ಮ

ಬ್ರಹ್ಮದತ್ತನು ಕಾಶೀರಾಜ್ಯವನ್ನು ಪಾಲಿಸಿಕೊಂಡಿದ್ದ ಕಾಲದಲ್ಲಿ ಸೇನಕನೆಂಬೊಬ್ಬ ದೊಡ್ಡ ಸಾಧು ವಾರಣಾಸಿಯಲ್ಲಿದ್ದನು. ಬೋಧಿಸತ್ವನ ಅನೇಕ ಜನ್ಮಗಳಲ್ಲಿ ಈ ಸಾಧುವಿನ ಜನ್ಮವೂ ಒಂದು. ಅಂತಲೇ ಆ ಸಾಧುವಿನ ಮುಖ ಮಂಡಲದಲ್ಲಿ ಯಾವಾಗಲೂ ದಿವ್ಯ ತೇಜಸ್ಸು ಮನೆಮಾಡಿ ಕೊಂಡಿದ್ದಿತು. ಅವನ ಜ್ಞಾನಗಳ ತೇಜಸ್ಸೇ ಹಾಗೆ ನೆಲೆಸಿತ್ತು.

ಅದೇ ಕಾಲದಲ್ಲಿ ನಗರಕ್ಕೆ ಸಮೀಪವಾಗಿದ್ದ ಒಂದು ಗ್ರಾಮದಲ್ಲಿ ಭಿಕ್ಷಾಟನೆಯಿಂದಲೇ ಜೀವಿಸಿ ಕೊಂಡಿರುವ ಒಬ್ಬ ಬ್ರಾಹ್ಮಣನಿದ್ದನು. ಅವನು ಒಂದು ದಿನ ಯಾವುದೋ ಒಂದು ದೂರದ ಗ್ರಾಮದಲ್ಲಿ ಭಿಕ್ಷೆ ಎತ್ತಿಕೊಂಡು, ಒಂದು ಅರಣ್ಯದ ದಾರಿಯಲ್ಲಿ ಮನೆಗೆ ಹಿಂದಿರುಗಿ ಬರುತ್ತಿದ್ದನು. ಆಗ "ಎಲೋ ಬ್ರಾಹ್ಮಣಾ! ಈ ದಿನ ನೀನು ಮನೆಗೆ ಹೋಗದಿದ್ದರೆ ನಿನಗೆ ಮರಣವು ಬರುತ್ತದೆ. ಮನೆಗೆ ಹೋಗಿ ತಲಪಿದೆಯಾದರೆ ನಿನ್ನ ಹೆಂಡತಿಗೆ ಮರಣ ತಪ್ಪದು!" ಎಂಬ ಮಾತು ಕೇಳಿಸಿತು.

ಬ್ರಾಹ್ಮಣನು ಆ ಮಾತುಗಳನ್ನು ಕೇಳಿದ ಕೂಡಲೇ ಹೆದರಿ ನಡುಗಿದನು. ಬೇಗನೇ ಮನೆಗೆ ಹೋಗ ಬೇಕೆಂದಿದ್ದವನಿಗೆ ಕಾಲು ಏಳದೆ ಹೋಯಿತು. ತಾನು ಮನೆಗೆ ಹೋದರೆ ಹೆಂಡತಿ ಸಾಯುತ್ತಾಳಂತೆ! ಹಾಗೆಂದು ತಾನು ಕಾಡಿನಲ್ಲೇ ಉಳಿದು ಬಿಟ್ಟರೆ ತನಗೆ ಮರಣ! ಇಂತಹ ವಿಷಮ ಪರಿಸ್ಥಿತಿಯಲ್ಲಿ ಏನು ಮಾಡಲೂ ತೋರದೆ ಅವನ ಬುದ್ಧಿ ಮಂಕಾಯಿತು. ಸ್ವಲ್ಪ ಹೊತ್ತು ಕದಲಲು ಸಾಧ್ಯವಾಗದೆ ಮರದ ಹಾಗೆ ನಿಂತನು.

ಅರಣ್ಯದಲ್ಲೇ ನಿಲ್ಲಲು ಸಾಧ್ಯವಾಗದೆ ನಡೆಯುತ್ತ, ಅರಣ್ಯವನ್ನು ದಾಟಿ ಹೋಗುತ್ತ, ಒಂದು ನಗರವನ್ನು ತಲಪಿ ಬೀದಿಯಲ್ಲಿ ನಡೆಯುವಾಗ, ಬೋಧಿಸತ್ವನಾದ ಸೇನಕನು ಒಂದು ಕಡೆಯಲ್ಲಿ ಜನರಿಗೆ ಧರ್ಮಬೋಧೆ ಮಾಡುವ ದೃಶ್ಯ ಕಾಣಿಸಿತು.

ಸೇನಕನು ಉನ್ನತಾಸನದ ಮೇಲೆ ಆಸೀನನಾಗಿ ಮಾತಾಡುತ್ತಿರುವಾಗ ಸುತ್ತಲೂ ಗುಂಪುಗೂಡಿದ ಜನರು ಬಹಳ ಭಕ್ತಿಯಿಂದಲೂ ಶ್ರದ್ಧೆಯಿಂದಲೂ ಕೇಳುತ್ತಿದ್ದರು. ಯಾರಿಗೂ ಬೇರೆ ವಿಷಯಗಳ ಮೇಲೆ ಗಮನ ಹರಿಯದಂತೆ ಸೇನಕನ ಮಾತುಗಳಲ್ಲಿ ಅಂತಃಸತ್ವವಿದ್ದಿತು. ಬ್ರಾಹ್ಮಣನು ಅಲ್ಲಿಗೆ ಹೋಗಿ ಜನರ ಹಿಂದಿನಿಂದ ನಿಂತುಕೊಂಡನು. ಪ್ರಾಣಭಯದಲ್ಲಿ

ಕುದಿದುಕೊಂಡಿರುವ ಅವನಿಗೆ ಬೋಧಿಸತ್ವನು ಏನು ಹೇಳುವನೆಂಬುದೊಂದೂ ಮನಸ್ಸಿಗೆ ಹತ್ತಲಿಲ್ಲ. ಆದರೂ ಅವನು ಏನೋ ಒಂದು ಆಸೆಯಿಂದ ಬೋಧಿಸತ್ವನ ಮುಖಮಂಡಲದ ತೇಜಸ್ಸನ್ನು ನೋಡುತ್ತಾ ನಿಶ್ಚಲನಾಗಿ ನಿಂತೇ ಇದ್ದನು. ಈತನಿಂದಲೇ ತನ್ನ ಪ್ರಾಣ ಉಳಿಯಬಹುದೆಂಬ ಆತ್ಮವಿಶ್ವಾಸ ಅವನಲ್ಲಿ ಒಸರಿಕೊಂಡಿತ್ತು.

ಸ್ವಲ್ಪ ಹೊತ್ತಿಗೆ ಬೋಧಿಸತ್ವ ಸೇನಕನು ಹೇಳುವಂತಹುದನ್ನು ಹೇಳಿ ಮುಗಿಸಿದನು. ಜನರು ಸಂತೋಷದಿಂದಲೂ ತೃಪ್ತಿಯಿಂದಲೂ ಹರ್ಷಧ್ವಾನ ಮಾಡಿದರು. ಆಮೇಲೆ ಅಲ್ಲಿ ಕೂಡಿದ ಜನರು ಎದ್ದು ಹೊರಟುಹೋಗತೊಡಗಿದರು. ಬ್ರಾಹ್ಮಣನು ಮಾತ್ರ ಚಲಿಸದೆ ಸ್ಥಾಣುವಿನಂತೆ ನಿಂತಿದ್ದನು.

ಉನ್ನತಾಸನದ ಮೇಲಿದ್ದು ಅಷ್ಟು ಹೊತ್ತಿನಿಂದಲೂ ನಿಂತಿರುವ ಬ್ರಾಹ್ಮಣನನ್ನು . ನೋಡಿ ಬೋಧಿಸತ್ವನು, ಅವನನ್ನು ತನ್ನ ಬಳಿಗೆ ಬರುವಂತೆ ಕೈಸನ್ನೆಯಿಂದ ಕರೆದನು.

ಬ್ರಾಹ್ಮಣನು ಆತುರದಿಂದ ಅವನ ಬಳಿಗೆ ಹೋಗಿ ತಲೆಬಾಗಿ ನಮಸ್ಕರಿಸಿ ಸುಮ್ಮನೆ ನಿಂತನು.

ಬೋಧಿಸತ್ವನು ಒಣಗಿದ ನಾಲಿಗೆಯನ್ನು ನೆನೆಸಿಕೊಂಡು ನಿಂತಿರುವ ಅವನನ್ನು ನೋಡಿ, " ನಿನ್ನನ್ನು ನೋಡಿದರೆ ಏನೋ ಕಷ್ಟದಲ್ಲಿರುವ ಹಾಗೆ ಕಾಣುತ್ತದೆ. ನಿನಗೆ ಬಂದ ಕಷ್ಟವೇನಪ್ಪಾ ? ಶಂಕಿಸ ಬೇಡ, ಹೇಳು" ಎಂದು ಕೇಳಿದನು.

ಬ್ರಾಹ್ಮಣನು ಕಣ್ಣೀರು ತುಂಬಿಕೊಂಡು, ಕಾಡಿನಲ್ಲಿ ತನ್ನ ಕಿವಿಗೆ ಬಿದ್ದ ಅಶರೀರವಾಣಿಯನ್ನು ಕುರಿತು ಎಲ್ಲವನ್ನೂ ಹೇಳಿ, " ಈಗ ನಾನು ಮನೆಗೆ ಹೋಗಲಿಕ್ಕೂ ಇಲ್ಲ, ಕಾಡಿನಲ್ಲಿರಲಿಕ್ಕೂ ಇಲ್ಲ. ಏನು ತಾನೇ ಮಾಡಲಿ ?" ಎಂದನು

"ಆ ಅಶರೀರವಾಣಿ ನಿನ್ನ ಕಿವಿಗೆ ಬೀಳುವುದಕ್ಕೆ ಮೊದಲು ನೀನು ಏನು ಮಾಡಿಕೊಂಡಿದ್ದಿ ?" ಎಂದು ಬೋಧಿಸತ್ವನು ಪ್ರಶ್ನಿಸಿದನು.

" ಆಗ ಮಧ್ಯಾಹ್ನದ ಹೊತ್ತಾದುದರಿಂದ ನಾನೊಂದು ಮರದ ಕೆಳಗೆ ಕುಳಿತುಕೊಂಡು ನಾನು



ತಂದುಕೊಂಡಿದ್ದ ಚೀಲವನ್ನು ಬಿಚ್ಚಿ ಅದರೊಳಗಿದ್ದ ಆಹಾರವನ್ನು ತಿಂದೆನು." ಎಂದನು ಬ್ರಾಹ್ಮಣ.

"ಅದು ನಿನ್ನ ಕೈಯಲ್ಲಿರುವ ಈ ಚೀಲತಾನೆ ? ಕಾಣುತ್ತಾ ಇದೆ. ನೀರಿನ ಪಾತ್ರ ಮಾತ್ರ ನಿನ್ನ ಹತ್ತಿರ ಇಲ್ಲ. ಆಹಾರ ತಿಂದಮೇಲೆ ನೀರು ಕುಡಿಯುವ ಅಗತ್ಯ ಬೀಳುವುದು ಸಹಜವಷ್ಟೆ ? ನೀರು ಕುಡಿಯಲು ಏನು ಮಾಡಿದಿ ?" ಎಂದು ಬೋಧಿಸತ್ವನು ಪ್ರಶ್ನಿಸಿದನು.

"ಹತ್ತಿರದಲ್ಲೇ ಒಂದು ತೊರೆ ಹರಿಯುತ್ತಿತ್ತು. ಅದರ ನೀರು ಒಳ್ಳೆಯದೆಂದು ಗೊತ್ತಿತ್ತು. ಅದಕ್ಕೇ ನೀರಿನ ಪಾತ್ರ ಇಟ್ಟುಕೊಂಡಿಲ್ಲ. ಅಲ್ಲಿಗೆ ಹೋಗಿ ನೀರು ಕುಡಿದೆನು." ಎಂದನು ಬ್ರಾಹ್ಮಣ.

"ನೀನು ತಿಂದ ಮೇಲೆ ಚೀಲದಲ್ಲಿ ಇನ್ನೇನಾದರೂ ಆಹಾರ ಉಳಿದಿದೆಯೋ ?" ಎಂದು ಕೇಳಿದನು ಬೋಧಿಸತ್ವ.

"ಸ್ವಾಮಿ, ಚೀಲದಲ್ಲಿರುವ ಆಹಾರದಲ್ಲಿ ಅರ್ಧವಷ್ಟೇ ತಿಂದೆನು. ಉಳಿದುದು ಚೀಲದಲ್ಲೇ ಇದೆ." ಎಂದನು ಬ್ರಾಹ್ಮಣ. ಅದನ್ನು ಕೇಳಿ ಬೋಧಿಸತ್ವನು ಒಂದು ಕ್ಷಣ ತಡೆದು ಬ್ರಾಹ್ಮಣನನ್ನು ನೋಡಿ, "ನೀನು ನೀರು ಕುಡಿಯಲು ತೊರೆಯ ಬಳಿಗೆ ಹೋಗುವ ಮೊದಲು ಆಹಾರವಿದ್ದ ಚೀಲವನ್ನು ಎಲ್ಲಿಟ್ಟೆ ? ಆ ಚೀಲದ ಬಾಯಿಯನ್ನು ಹಗ್ಗದಿಂದ ಕಟ್ಟಿರುವಿಯಾ ?" ಎಂದು ಕೇಳಿದನು.

"ಚೀಲವನ್ನು ತಿಂದಲ್ಲೇ ಬಿಟ್ಟಿದ್ದೆ. ಅದರ ಬಾಯಿ ಕಟ್ಟುವ ಕೆಲಸ ನೀರು ಕುಡಿದು ಬಂದ ಮೇಲೆ ಮಾಡಿದೆನು. ತರುವಾಯ ಚೀಲ ತೆಗೆದುಕೊಂಡು ಅಲ್ಲಿಂದ ಹೊರಟೆನು" ಎಂದನು ಬ್ರಾಹ್ಮಣ.

"ಚೀಲದ ಬಾಯಿ ಕಟ್ಟುವುದಕ್ಕೆ ಮೊದಲು ಚೀಲದೊಳಗೆ ಸರಿಯಾಗಿ ನೋಡಿದಿಯಾ ?" ಎಂದು ಬೋಧಿಸತ್ವನು ಪುನಃ ಪ್ರಶ್ನಿಸಿದನು.

ಬ್ರಾಹ್ಮಣನು ಆಗ ಏನು ಮಾಡಿದೆನೆಂಬುದನ್ನು ನೆನಪಿಗೆ ತಂದುಕೊಂಡು, ಆಲೋಚಿಸಿ "ಇಲ್ಲ ಸ್ವಾಮಿ, ಹಾಗೇನೂ ನೋಡಲಿಲ್ಲ" ಎಂದನು. ಬೋಧಿಸತ್ವನು ಆಗ ಏನು ನಡೆಯಿತೆಂಬುದನ್ನು



ಊಹಿಸುತ್ತ, ಸ್ವಲ್ಪ ಹೊತ್ತು ಮೌನವಾಗಿದ್ದು, ಆಮೇಲೆ ಬ್ರಾಹ್ಮಣನನ್ನು ನೋಡಿ, "ನೀನು ಮರದಡಿಯಿಂದ ತೊರೆಯ ಕಡೆಗೆ ಹೋದ ಕೂಡಲೇ ನಿನಗೂ ನಿನ್ನ ಹೆಂಡತಿಗೂ ಬರಲಿರುವ ಆಪತ್ತನ್ನು ಕುರಿತು ಎಚ್ಚರಿಕೆಯ ಧ್ವನಿ ಕೇಳಿಸಿತೇನು ?" ಎಂದು ಕೇಳಿದನು.

"ಹೌದು ಸ್ವಾಮಿ. ನೀರು ಕುಡಿದು ತೊರೆಯ ಕಡೆಯಿಂದ ಹತ್ತು, ಹನ್ನೆರಡು ಹೆಜ್ಜೆ ನಡೆದಿರಬಹುದು. ಅಷ್ಟರಲ್ಲಿ ಯಾರೋ ಸ್ಪಷ್ಟವಾಗಿ ಆ ವಿಚಿತ್ರ ಎಚ್ಚರಿಕೆಯನ್ನು ಹೇಳಿದರು. ಸುತ್ತಲೂ ನೋಡಿದೆನು. ಯಾರೂ ಕಾಣಲಿಲ್ಲ" ಎಂದನು ಬ್ರಾಹ್ಮಣ.

"ಅಂದರೆ ನೀನು ಮರದ ಬಳಿಯಿಂದ ಹೋಗಿ ನೀರು ಕುಡಿದು ಬರುವಷ್ಟರಲ್ಲಿ ಏನೋ ನಡೆದಿರಬೇಕು. ಬಹುಶಃ ಯಾವುದೋ ಹಾವು ಚೀಲದೊಳಗಿನ ಆಹಾರಕ್ಕಾಗಿ ಅದರೊಳಗೆ ಹೊಕ್ಕಿರಬೇಕು. ಅದನ್ನು ನೋಡಿದ ಯಕ್ಷನೋ, ವೃಕ್ಷ ದೇವತೆಯೋ ನಿನಗೆ ಎಚ್ಚರಿಕೆ ಕೊಟ್ಟಿದ್ದಾರೆ. ನೀನು ಈ ದಿನ ಮನೆಗೆ ಹೋಗದಿದ್ದರೆ, ಆಹಾರಕ್ಕಾಗಿ ಚೀಲದ ಬಾಯಿಬಿಚ್ಚಿ ಅದರೊಳಗೆ ಕೈ ಹಾಕುವಿ. ಆಗ ಹಾವು ನಿನ್ನನ್ನು ಕಡಿದು ನಿನ್ನ ಮರಣಕ್ಕೆ ಕಾರಣವಾಗುತ್ತದೆ. ಹಾಗಿಲ್ಲದೆ ಈ ದಿನವೇ ನೀನು ಮನೆಗೆ ಸೇರಿಬಿಟ್ಟರೆ ನಿನ್ನ ಹೆಂಡತಿ ಚೀಲದಲ್ಲಿ ಏನಿರುವುದೆಂದು ನೋಡಲು ಕೈ ತೂರಿಸುತ್ತಾಳೆ. ಆಮೇಲೆ ಅವಳು ಹಾವಿನ ಕಡಿತದಿಂದ ಸಾಯುತ್ತಾಳೆ" ಎಂದನು ಬೋಧಿಸತ್ವ.

ಅವನು ಬ್ರಾಹ್ಮಣನಿಗೆ ಚೀಲವನ್ನು ತನ್ನ ಆಸನದ ಹತ್ತಿರ ಇಡಲು ಹೇಳಿದನು. ಆಗ ಜನರ ಗುಂಪಿನಲ್ಲಿದ್ದ ಒಬ್ಬ ಹಾವಾಡಿಗನನ್ನು ನೋಡಿ ಬೋಧಿಸತ್ವನು ಸೈಗೆಯಿಂದ ಕರೆದನು.

ಅವನು ಬಂದು ಆ ಚೀಲದ ಬಾಯಿ ಬಿಚ್ಚಿದನು. ಒಳಗಿನಿಂದ ಭುಸುಗುಡುತ್ತ, ಒಂದು ನಾಗರಹಾವು ಹೊರಗೆ ಬಂತು.

ಕೂಡಲೇ ಹಾವಾಡಿಗನು ತನ್ನ ಉಪಾಯದಿಂದ ಅದನ್ನು ಹಿಡಿದು ದೂರ ತೆಗೆದುಕೊಂಡು ಹೋಗಿ ಬಿಟ್ಟು ಬಂದನು.

ಅನಂತರ ಬೋಧಿಸತ್ವನು ಬ್ರಾಹ್ಮಣನನ್ನು ನೋಡಿ "ಇನ್ನು ನೀನು ಯಾವ ಭಯವೂ ಇಲ್ಲದೆ ಸಂತೋಷವಾಗಿ ಮನೆಗೆ ಹೋಗಬಹುದು" ಎಂದನು.

ನಿಜಕ್ಕೂ ಈ ಘಟನೆಯಿಂದ ಬ್ರಾಹ್ಮಣನ ಭಯವು ನಿವಾರಣೆಯಾಗಿತ್ತು. ಅವನು ಬೋಧಿಸತ್ವನಿಗೆ ಹೃತ್ಪೂರ್ವಕ ಕೃತಜ್ಞತೆ ಹೇಳಿ, ನಮಸ್ಕರಿಸಿ ತಿಳಿ ಮನಸ್ಸಿನಿಂದ ತನ್ನ ಮನೆಯ ದಾರಿ ಹಿಡಿದನು.





# ಛತ್ರಪತಿ ಶಿವಾಜಿ - ೧

ಮೊಗಲ್ ಸಾಮ್ರಾಜ್ಯವನ್ನು ಗಡಗಡ ನಡುಗಿಸಿದ ವೀರಶಿವಾಜಿ ೧೬೨೭ನೆಯ ಇಸವಿಯಲ್ಲಿ ಹುಟ್ಟಿದನು. ಶಿವಾಜಿಯ ತಂದೆ ಷಾಜೀ. ಬೀಜಪೂರ್ ಸುಲ್ತಾನನ ಆಸ್ಥಾನದಲ್ಲಿ ಜಾಗೀರುದಾರನಾಗಿದ್ದನು. ಆದರೆ ಶಿವಾಜಿಯ ಬಾಲ್ಯವು ತಾಯಿ ಜಿಜೀಯಾಬಾಯಿಯ ಕುಟುಂಬ ಮಿತ್ರನಾದ ದಾದಾಜೀ ಸಂರಕ್ಷಣೆಯಲ್ಲಿ ಪೂನಾದಲ್ಲೇ ಕಳೆಯಿತು.

ಬಾಲಕನಾಗಿರುವಾಗಲೇ ಶಿವಾಜಿ ಅದ್ಭುತವಾದ ಧೈರ್ಯ ಸಾಹಸಗಳನ್ನು ಪ್ರದರ್ಶಿಸಿ ಸಮೀಪದಲ್ಲಿದ್ದ ಗುಡ್ಡಗಾಡು ಪ್ರಾಂತದ ಮಾವಳಿಗರ ಅಭಿಮಾನಕ್ಕೆ ಪಾತ್ರನಾದನು. ಕ್ರಮಕ್ರಮವಾಗಿ ಅವರು ಶಿವಾಜಿಯನ್ನು ತಮ್ಮ ನಾಯಕನೆಂದು ಭಾವಿಸತೊಡಗಿದರು.





ಧೈರ್ಯಶಾಲಿಯಾದರೂ ಶಿವಾಜಿಗೆ ಸ್ವಲ್ಪವೂ ಗರ್ವವಿರಲಿಲ್ಲ. ಮತವಿಷಯಗಳಲ್ಲಿ ಅವನಿಗೆ ಬಹಳ ಅಭಿಮಾನವಿದ್ದಿತು. ಆ ಕಾಲದ ಪ್ರಜೆಗಳಲ್ಲಿ ಐಕಮತ್ಯವನ್ನೂ, ಮತಾಭಿಮಾನವನ್ನೂ ಕೆರಳಿಸಿದ ಪ್ರಮುಖ ಸಾಧುವಾದ ರಾಮದಾಸರ ಮೇಲೆ ಶಿವಾಜಿಗೆ ಎಣೆಯಿಲ್ಲದಷ್ಟು ಗೌರವಾಭಿಮಾನಗಳಿದ್ದುವು.



ಬಲುಬೇಗದಲ್ಲೇ ಶಿವಾಜಿ ಚಿಕ್ಕದೊಂದು ಸೈನ್ಯವನ್ನೇ ಸೇರಿಸಿಕೊಂಡನು. ಸೈನಿಕರು ಶಿವಾಜಿಯ ಮೇಲೆ ಅಚಲವಾದ ಭಕ್ತಿವಿಶ್ವಾಸಗಳನ್ನಿಟ್ಟಿದ್ದರು. ಅವರ ಸಹಾಯದಿಂದ ಶಿವಾಜಿ ಬಿಜಾಪೂರದ ಸರಿಹದ್ದಿನಲ್ಲಿರುವ ಕೋಟೆಗಳನ್ನೂ, ದುರ್ಗಗಳನ್ನೂ ಒಂದರಹಿಂದೊಂದಾಗಿ ವಶಪಡಿಸಿಕೊಂಡನು. ಈ ವಿಷಯವನ್ನು ತಿಳಿದು ಬಿಜಾಪೂರ್ ಸುಲ್ತಾನನು ಶಿವಾಜಿಯನ್ನು ಅಡಗಿಸಲು ಸೈನ್ಯಾಧಿಕಾರಿ ಅಫ್‌ಜಲ್‌ಖಾನನನ್ನು ಕಳುಹಿಸಿದನು.

ಅಫ್‌ಜಲ್‌ಖಾನನ ದೊಡ್ಡ ಸೈನಿಕ ಬಲವನ್ನು ಶಿವಾಜಿಯ ಸೈನ್ಯವು ಛಿದ್ರಛಿದ್ರ ಮಾಡಿತು. ಕಡೆಗೆ ಅಫ್‌ಜಲ್‌ಖಾನ್ ಶಿವಾಜಿಯನ್ನು ಒಂದು ಏಕಾಂತ ಪ್ರದೇಶದಲ್ಲಿ ಕಲೆತುಕೊಳ್ಳಲು ಒಪ್ಪಿದನು. ನಿರ್ಣಯಿಸಲ್ಪಟ್ಟ ಸಮಯದಲ್ಲಿ ಗೊತ್ತಾದ ಪ್ರದೇಶದಲ್ಲಿ ಇಬ್ಬರು ಪ್ರತ್ಯರ್ಥಿಗಳೂ ಇದಿರಿದಿರಾಗಿ ಬರತೊಡಗಿದರು.





ಶಿವಾಜಿಯನ್ನು ಆಲಿಂಗಿಸಿಕೊಳ್ಳಲು ಕೈಗಳನ್ನು ಚಾಚುವಂತೆ ನಟಿಸಿ, ಅವನ ಕುತ್ತಿಗೆ ಹಿಸುಕಲು ನೋಡಿದನು ಅಫ್‌ಜಲ್‌ಖಾನ್. ಆದರೆ ಈ ತಂತ್ರವನ್ನು ಮೊದಲೇ ಊಹಿಸಿ, ಅದಕ್ಕೆ ಮೊದಲೇ ಸಿದ್ಧನಾಗಿ ಬಂದಿದ್ದ ಶಿವಾಜಿ, ತನ್ನ ಎಡಗೈಯ ಬೆರಳುಗಳಲ್ಲಿ ತಗಲಿಸಿಕೊಂಡಿದ್ದ ಹುಲಿಯುಗುರಿನಂತಹ ಕಬ್ಬಿಣದ ಕವಚಾಯುಧದಿಂದ ಅಫ್‌ಜಲ್‌ಖಾನನನ್ನು ಇರಿದು ಕೊಂದುಬಿಟ್ಟನು.

ಶಿವಾಜಿ ಮೊಗಲ್ ಸಾಮ್ರಾಜ್ಯದ ಸರಿಹದ್ದುಗಳನ್ನು ಜಯಿಸಲು ಪ್ರಾರಂಭಿಸಿದಾಗಲೇ ಔರಂಗಜೇಬನು ತನ್ನ ಸೇನಾನಾಯಕನಾದ ಷಯಿಸ್ತೈಖಾನನನ್ನು ಶಿವಾಜಿಯ ಮೇಲೆ ಕಳುಹಿಸಿದನು. ಮಹಾರಾಷ್ಟ್ರರ ಕೋಟೆಗಳನ್ನು ಬಹಳ ಮಟ್ಟಿಗೆ. ಮತ್ತೆ ಆಕ್ರಮಿಸಿಕೊಂಡ ಷಯಿಸ್ತೈಖಾನ್ ಪೂನಾದಲ್ಲಿದ್ದ ಶಿವಾಜಿಯ ರಾಜಧಾನಿಯನ್ನೂ ಹಿಡಿದನು. ಒಂದು ದಿನ ರಾತ್ರಿ ನಡೆದ ಮದುವೆಯ ಮೆರವಣಿಗೆಯೊಂದಿಗೆ ಶಿವಾಜಿಯೂ, ಅವನ ಅನುಚರರೂ ಷಯಿಸ್ತೆಖಾನನ ಶಿಬಿರದ ಕಡೆಗೆ ಹೊರಟರು.





ಶಿವಾಜಿ ತನ್ನ ಇಪ್ಪತ್ತು ಮಂದಿ ಅನುಚರರೊಂದಿಗೆ ಹಠಾತ್ತಾಗಿ ಶಿಬಿರದ ಮೇಲೆ ದಾಳಿ ಮಾಡಿದನು. ಬಿಚ್ಚುಗತ್ತಿಯನ್ನು ಹಿಡಿದುಕೊಂಡು ಶಿವಾಜಿ ಷಯಿಸ್ತೈಖಾನನ ಕೋಣೆಯೊಳಗೆ ನುಗ್ಗಿದನು. ಅವನನ್ನು ನೋಡುತ್ತಲೇ ಮೊಗಲ್ ಸೈನ್ಯಾಧಿಪತಿ ಕಿಟಕಿಯ ಮೂಲಕ ಹಾರಿ ಓಡಿದನು. ಆ ಸಮಯದಲ್ಲಿ ಅವನ ಕೈಯ ಮೂರು ಬೆರಳುಗಳು ಶಿವಾಜಿಯ ಕತ್ತಿಯ ಪೆಟ್ಟಿನಿಂದ ತುಂಡಾಗಿ ಅಲ್ಲಿ ಬಿದ್ದುವು.

ಔರಂಗಜೇಬನ ಕಡೆಯಿಂದ ರಾಜಾ ಜೈಸಿಂಗ್ ಶಿವಾಜಿಯೊಡನೆ ರಾಯಭಾರಗಳನ್ನು ನಡೆಸಿದನು. ಎಲ್ಲಾ ವಿಧವಾದ ರಕ್ಷಣೆಗಳೊಂದಿಗೆ ನೋಡಿಕೊಳ್ಳುವೆನೆಂದು ಮಾತುಕೊಟ್ಟು ಜೈಸಿಂಗ್. ಚರ್ಚೆ ನಡೆಸಲು ಶಿವಾಜಿಯನ್ನು ಆಗ್ರಾಕ್ಕೆ ಆಹ್ವಾನ ಮಾಡಿದನು. ತನ್ನ ಕುಮಾರ ಶಂಭೂಜೀಯೊಂದಿಗೆ ಶಿವಾಜಿ ಆಗ್ರಾವನ್ನು ಸೇರಿದನು. ಅಲ್ಲಿ ಅವನಿಗೆ ಸರಿಯಾದ ಗೌರವತೋರದೆ ಹೋದುದರಿಂದ ಶಿವಾಜಿ ಇದಿರು ತಿರುಗಿದನು.





ತಂದೆ ಮಗಂದಿರು ಒಂದು ಮನೆಯಲ್ಲಿ ಬಂಧಿಸಲ್ಪಟ್ಟರು. ರಕ್ಷಣೆಯ ಏರ್ಪಾಡುಗಳೆಲ್ಲ ಬಂಧನದ ಏರ್ಪಾಡುಗಳೇ ಆದುವು. ತನ್ನ ಬಲಿಷ್ಠ ಶತ್ರು ಸಿಕ್ಕಿಬಿದ್ದನೆಂದು ಔರಂಗಜೇಬನಿಗೆ ಪರಮಾನಂದವಾಯಿತು. ಶಿವಾಜಿ ಅಸ್ವಸ್ಥನಾದಂತೆ ನಟಿಸುತ್ತ. ಪುಣ್ಯಕಾರ್ಯಗಳಂತೆ ದೊಡ್ಡ ಚೀಲಗಳಲ್ಲಿ ಆಹಾರ ಪದಾರ್ಥಗಳನ್ನು ಬಡಜನರಿಗೆ ಹಂಚಲು ಕಳುಹಿಸುತ್ತಲಿದ್ದನು. ದಿನದಿಂದ ದಿನಕ್ಕೆ ಈ ಚೀಲಗಳ ಸಂಖ್ಯೆ ಹೆಚ್ಚುತ್ತಾ ಬಂದಿತು.

ಒಂದು ದಿನ ಶಿವಾಜಿ, ಶಂಭೂಜಿಯರು ಆಹಾರದ ಚೀಲದೊಳಗೆ ಸೇರಿ, ವೈದಿನೊಳಗಿನಿಂದ ಹೊರಬಿದ್ದರು. ಅಭ್ಯಾಸದಂತೆ ಕಾವಲಿನವರು ಆ ಚೀಲಗಳ ಮೂಟೆಗಳನ್ನು ಹೊರಕ್ಕೆ ಬಿಡಲು ಅಭ್ಯಂತರ ಹೇಳಲಿಲ್ಲ. ಔರಂಗಜೇಬನಿಗೆ ಈ ಸಂಗತಿ ಬಹಳ ತಡವಾಗಿ ತಿಳಿಯಿತು.






ಸನ್ಯಾಸಿಗಳ ವೇಷಧರಿಸಿ ತಂದೆ ಮಗಂದಿರು ಆಗ್ರಾವನ್ನು ಬಿಟ್ಟರು. ನಗರದ ಮೇರೆಗಳಲ್ಲಿ ಶಿವಾಜಿಯ ಅನುಚರರು ಕುದುರೆಗಳೊಂದಿಗೆ ಸಿದ್ಧರಾಗಿದ್ದರು. ಕೆಲವು ದಿನಗಳಲ್ಲಿ ಶಿವಾಜಿಯೂ, ಶಂಭೂಜಿಯೂ ಪೂನಾದಲ್ಲಿರುವ ತಮ್ಮ ಪರಿವಾರವನ್ನು ಸೇರಿಕೊಂಡರು. ಶಿವಾಜಿಯನ್ನು ಶಾಂತಪಡಿಸಿ ಒಲಿತು ಮಾಡಿಕೊಳ್ಳಲಿಕ್ಕಾಗಿ, ಔರಂಗಜೇಬನು ಅವನಿಗೆ 'ರಾಜಾ' ಎಂಬ ಬಿರುದನ್ನು ಕೊಟ್ಟನು.

# ಪ್ರತ್ಯಕ್ಷ ಸಲಹೆ!

**ಕೃ**ಷ್ಣಯ್ಯ ಒಳ್ಳೆಯ ಪ್ರಾಯದಲ್ಲಿದ್ದನು. ಧಷ್ಟ ಪುಷ್ಟ ಖಂಡ ತುಂಬಿದ ದೇಹದಿಂದ, ಹುರಿ ಮೀಸೆಯ ಸುರುಳಿಗಳಿಂದ ನೋಡಿದವರಿಗೆ ಯಮಕಿಂಕರನ ಹಾಗೆ ಕಾಣುವನು.

ಅವನು ತನ್ನ ಗ್ರಾಮದಲ್ಲಿ ತರಕಾರಿಗಳನ್ನು ಬೆಳೆಯಿಸಿ ಅವುಗಳನ್ನು ಸ್ವತಃ ಪಟ್ಟಣಕ್ಕೆ ಹೊತ್ತುಕೊಂಡು ಹೋಗಿ ಮಾರಿ ಬರುತ್ತಿದ್ದನು. ಒಂದುಸಾರಿ ಅವನು ಪಟ್ಟಣದಲ್ಲಿ ತರಕಾರಿಗಳನ್ನು ಮಾರಿ, ಹಣದ ಚೀಲವನ್ನು ಸೊಂಟದಲ್ಲಿ ಕಟ್ಟಿಕೊಂಡು, ಹಿಂದಿರುಗಿ ಪ್ರಯಾಣಮಾಡುತ್ತಿದ್ದಾಗ, ಅವನ ಸ್ನೇಹಿತನೊಬ್ಬನು, "ಕೃಷ್ಣಯ್ಯಾ, ದಿನಗಳು ಕೆಟ್ಟಿವೆ. ನಾಲ್ಕು ಮಂದಿಯ ಕಣ್ಣಿಗೆ ಕಾಣುವ ಹಾಗೆ ಹಣವಿಟ್ಟುಕೊಳ್ಳಬೇಡ. ಒಳಬದಿಯಲ್ಲಿಟ್ಟುಕೋ" ಎಂದು ಸಲಹೆ ಮಾಡಿದನು. ಕೃಷ್ಣಯ್ಯ ಮೀಸೆ ತಿರುಗಿಸಿ "ನನ್ನ ಕೈಯಿಂದಲೇ ಹಣ ದೋಚುವ ಕಳ್ಳ ಯಾವನವನು ?" ಎಂದು ತನ್ನ ಊರಿಗೆ ಹಾಗೇ ನಡೆದನು.

ದಾರಿಯಲ್ಲಿ ಅವನಿಗೆ ಬಾಯಾರಿಕೆ ಆಯಿತು. ಹತ್ತಿರವಿದ್ದ ಇಳಿಬಾವಿಗಿಳಿದು ದಾಹ ತೀರಿಸಿ, ಪಕ್ಕದಲ್ಲಿದ್ದ ಸತ್ರದ ಜಗಲಿಯಲ್ಲಿ ಬಳಲಿಕೆ ತೀರಿಸಿಕೊಳ್ಳಲು ಕುಳಿತನು.

ಆ ಸಮಯದಲ್ಲಿ ಒಬ್ಬ ಸೊರಕಲು ಮನುಷ್ಯ ಅವನ ಹತ್ತಿರ ಬಂದು, "ಮೈ ಕೈ ಸ್ವಲ್ಪ ಹಿಸುಕಿದರೆ ಬಳಲಿಕೆ ಬೇಗ ಹೋಗುತ್ತದೆ. ಹಿಸುಕಲೆ ?" ಎಂದನು.

ಕೃಷ್ಣಯ್ಯ ಸರಿ ಎನ್ನಲು, ಸೊರಕಲಿನವನು ಅವನ ಮೈ ಕೈ ಒತ್ತುತ್ತ, ಕುತ್ತಿಗೆಯ ಹತ್ತಿರ ಯಾವುದೋ ನರವನ್ನು ಹಿಸುಕಿದ ಕೂಡಲೇ ಕೃಷ್ಣಯ್ಯನಿಗೆ ಬೋಧ ತಪ್ಪಿತು.

ಅರ್ಧ ಗಂಟೆಯ ಮೇಲೆ ಕೃಷ್ಣಯ್ಯ ಮತ್ತೆ ಎಚ್ಚರಕ್ಕೆ ಬಂದನು. ಸೊಂಟದಲ್ಲಿ ಹಣದ ಚೀಲ ಕಾಣದೆ ಅವನು ಗಾಬರಿಯಿಂದ ಆಚೀಚೆ ನೋಡುವಾಗ, ಸೊರಕಲು ಮನುಷ್ಯ ಅವನ ಬಳಿಗೆ ಬಂದು, "ಇಕ್ಕೊಳ್ಳಿ ನಿಮ್ಮ ಹಣದ ಚೀಲ. ಹಣ ಸರಿಯಿದೆಯೋ ಇಲ್ಲವೋ ನೋಡಿಕೊಳ್ಳಿ. ನಾಲ್ಕು ಮಂದಿಗೆ ಕಾಣುವ ಹಾಗೆ ಹಣದ ಚೀಲ ಇಟ್ಟುಕೊಳ್ಳಬಾರದೆಂದು ನಿಮಗೆ ಹೀಗೆ ಸಲಹೆ ಮಾಡಿದೆನು. ಅಷ್ಟೇ. ನನ್ನ ಹೆಸರು ಸಲಹೇ ಸಾಂಬನೆಂದು. ನನ್ನದೆಲ್ಲವೂ ಪ್ರತ್ಯಕ್ಷ ಸಲಹೆಗಳೇ !" ಎಂದನು.

ಕೃಷ್ಣಯ್ಯ ಮುಗುಳು ನಕ್ಕು ಅವನಿಗೆ ಒಂದು ವರಹ ಬಹುಮಾನ ಕೊಟ್ಟನು.





# ಹುಣಿಸೇಹಣ್ಣಿನ ಮೂಟೆ

ಒಂದಾನೊಂದು ಗ್ರಾಮದಲ್ಲಿ ಒಬ್ಬ ವರ್ತಕನಿದ್ದನು. ಅವನ ಕುಟುಂಬವು ದೊಡ್ಡದು. ಆದರೆ ಅವನ ವ್ಯಾಪಾರವು ಚಿಕ್ಕದು. ಆದುದರಿಂದ . ಅವನು ಮಿತವ್ಯಯವನ್ನೇ ಅಭ್ಯಾಸ ಮಾಡಿ ಮೈಗೂಡಿಸಿ ಕೊಂಡಿದ್ದನು. ಒಂದು ಚಿಕ್ಕಾಸನ್ನು ಕೂಡಾ ಸುಮ್ಮನೆ ಖರ್ಚು ಮಾಡುತ್ತಿದ್ದಿಲ್ಲ. ಬಹು ಜಾಗರೂಕತೆಯಿಂದ ಕುಟುಂಬವನ್ನೂ, ವ್ಯಾಪಾರ ವ್ಯವಹಾರವನ್ನೂ ನಡೆಸುತ್ತ ಕಾಲಕ್ಷೇಪ ಮಾಡುತ್ತಿದ್ದನು.

ಅವನು ಆಗಾಗ ನಗರಕ್ಕೆ ಹೋಗಿ ತನಗೆ ಬೇಕಾದ ಸರಕುಗಳನ್ನು ತಂದುಕೊಳ್ಳುತ್ತಾನೆ. ಆದರೆ ಅವು ಗಳನ್ನು ಗಾಡಿಯ ಮೇಲೆ ಹಾಕಿ ರಾಜ ಬೀದಿಯಲ್ಲಿ ತರುತ್ತಿದ್ದಿಲ್ಲ. ಕಾರಣವೇನೆಂದರೆ ರಾಜಬೀದಿಯಲ್ಲಿ ಸುಂಕದ ಕಟ್ಟೆ ಇದ್ದಿತು. ಆ ಬೀದಿಯಲ್ಲಿ ನಗರದ ಸರಕು ಕೊಂಡು ಕೊಂಡು ಹೋಗುವವರು ಸುಂಕದ ಹಣ ಕೊಡಬೇಕಾಗುತ್ತಿತ್ತು. ಆ ಸುಂಕದ ಹಣವೂ, ಗಾಡಿಯ ಬಾಡಿಗೆಯ ಹಣವೂ ಉಳಿಯುತ್ತವೆಂದು ಕೊಂಡು ಆ ವರ್ತಕನು ನಗರದಲ್ಲಿ ತನಗೆ ಹೊರಲು ಸಾಧ್ಯವಿರುವಷ್ಟೇ ಸರಕುಗಳನ್ನು ಕೊಂಡುಕೊಂಡು, ಗೋಣೀ ಚೀಲದಲ್ಲಿ ತುಂಬಿಸಿ ಕಟ್ಟಿ, ಕಾಡಿನೊಳಗಿನ ಸುತ್ತು ದಾರಿಯಿಂದ ತನ್ನ ಊರಿಗೆ ನಡೆಯುತ್ತಾ ಹೊತ್ತುಕೊಂಡೇ ಬರುತ್ತಿದ್ದನು.

ಕಾಡು ದಾರಿಯಲ್ಲಿ ದೂರ ಹೆಚ್ಚಾಗುವುದು ಮಾತ್ರವಲ್ಲದೆ, ಕಳ್ಳರ ಭಯವೂ, ಕ್ರೂರಮೃಗಗಳ ಭಯವೂ ಇತ್ತು, ಆದರ ಮೇಲೆ ಪಿಶಾಚಗಳಿರುವು ವೆಂದೂ ಜನರು ಹೇಳಿಕೊಳ್ಳುತ್ತಿದ್ದರು. ಆದರೆ ಬಡವರ್ತಕನಿಗೆ ಆ ಭಯವಿರಲಿಲ್ಲ. ಒಮ್ಮೆ ಕಳ್ಳರು ಅಟಕಾಯಿಸಿದಾಗ ವರ್ತಕನು ತನ್ನ ಪರಿಸ್ಥಿತಿಯನ್ನು ಹೇಳಿಕೊಂಡ ಮೇಲೆ ಕಳ್ಳರ ನಾಯಕನಿಗೆ ಅವನ ಮೂಟೆಯಲ್ಲಿ ಹೆಚ್ಚಿನ ಲಾಭವಿಲ್ಲದ್ದರಿಂದ ಕನಿಕರ ಬಂದು ಅವನ ತಂಟೆಗೆ ಯಾರೂ ಹೋಗಕೂಡ ದೆಂದು ಜತೆಗಾರರೆಲ್ಲರಿಗೂ ಹೇಳಿದ್ದನು. ಆದುದರಿಂದ ಕಳ್ಳರ ಭಯದಿಂದ ಮುಕ್ತನಾಗಿದ್ದನು. ಹಗಲಿನಲ್ಲಿ ಕ್ರೂರ ಮೃಗಗಳ ಕಾಟ ಕಡಿಮೆ. ಉಳಿದ ಭಯಕ್ಕೆ ಧೈರ್ಯವೇ ಶರಣು.

ಹಾಗೆ ಒಂದು ಸಾರಿ ವರ್ತಕನು ಸರಕುಗಳ ಮೂಟೆಯನ್ನು ಹೊತ್ತುಕೊಂಡು ಅರಣ್ಯ ಮಾರ್ಗ ದಲ್ಲಿ ತನ್ನ ಊರಿಗೆ ಬರುತ್ತಿರುವಾಗ, ಒಂದು ಮರದ ಮೇಲಿದ್ದ ಪಿಶಾಚಿ ಅವನ ಮುಂದೆ ಒಮ್ಮೆಗೇ

ಹಾರಿ "ಅಬ್ಬ! ಸಿಕ್ಕಿದೆಯಾ ಮನುಷ್ಯಾ! ಬಹಳ ಹಸಿವೆ! ನಿನ್ನನ್ನು ನುಂಗುತ್ತೇನೆ" ಎನ್ನುತ್ತಾ ಬಾಯಿ ತೆರೆದು ಮುಂದೆ ಬಂದಿತು.

ಕ್ಷಣ ಮಾತ್ರ ಹೆದರಿದ ವರ್ತಕನು, ಕೂಡಲೇ ಧೈರ್ಯ ತಂದುಕೊಂಡು "ಓಸ್! ಮರ ಪಿಶಾಚಿಯೋ! ಪರವಾಗಿಲ್ಲ? ದಬ್ಬಣದೋರ್ದಂಡನೋ ಅಂದುಕೊಂಡೆ!" ಎಂದನು.

ಆ ಮಾತು ಕೇಳಿ ಪಿಶಾಚಿಗೆ ಆಶ್ಚರ್ಯ ಉಂಟಾಯಿತು. ಈ ಮನುಷ್ಯನಿಗೆ ಪಿಶಾಚಿಗಳೆಂದರೆ ಭಯವೇ ಇಲ್ಲ. ಆದಾವನೋ ದಬ್ಬಣದೋರ್ದಂಡನನ್ನ ನೆನೆದು ಭಯ ಪಡುತ್ತಾನೆ!

"ಯಾರೋ ಆ ದಬ್ಬಣದೋರ್ದಂಡ? ನಾನು ಕೇಳಲೇ ಇಲ್ಲವಲ್ಲ? ಅವನು ನನಗಿಂತ ಭಯಂಕರ ನೇನು? ಎಲ್ಲಿರುತ್ತಾನೆ? ನಿನಗೇನು ಮಾಡಿದ?" ಎಂದಿತು ಪಿಶಾಚಿ.

"ದಬ್ಬಣದೋರ್ದಂಡ ಈ ದಾರೀಲಿ ಬರೋದಿಲ್ಲವೆಂಬ ಧೈರ್ಯದಲ್ಲೇ ನಾನು ಈ ದಾರಿ ಹಿಡಿದದ್ದು. ಅವನು ನೋಡಿಬಿಟ್ಟರೆ ನಿನ್ನನ್ನೂ ನನ್ನನ್ನೂ ಕೊಂದು ಹಾಕುತ್ತಾನೆ. ಅವನ ತಂಟೆಗೆ ಹೋಗಲೇ ಬಾರದು. ನನ್ನಂಥವರನ್ನು ಗುಳುಮ್ಮನೆ ನುಂಗುವುದಷ್ಟೇ ನಿನ್ನಿಂದಾಗುವಂಥಾದ್ದು, ದಬ್ಬಣ ದೋರ್ದಂಡ ಹಾಗಲ್ಲಪ್ಪ! ಅಯ್ಯಯ್ಯೊ! ಅವನು ಚುಚ್ಚಿ ತಿವಿದು ಕುಕ್ಕಿ ಚಿತ್ರವಧೆ ಮಾಡುತ್ತಾನೆ. ಕಾಟಕೊಟ್ಟು ಕೊಲ್ಲುವುದು ಅವನಿಗೊಂದು ಆಟ! ಇವತ್ತು ಕೊಲ್ಲಲು ಶುರು ಮಾಡಿದರೆ ಪ್ರಾಣ ಹೋಗಲಿಕ್ಕೆ ಮೂರು ದಿನವಾಗುತ್ತದೆ" ಎಂದನು ವರ್ತಕ.

ತನ್ನನ್ನು ನೋಡಿ ಹೆದರಿ ವರ್ತಕನು ಮೂರ್ಛೆ ಬೀಳುವುದಕ್ಕೆ ಬದಲಾಗಿ ಯಾವನೋ ದಬ್ಬಣ ದೋರ್ದಂಡನನ್ನು ಕುರಿತು ಹೇಳಿ ತನ್ನನ್ನು ಹೆದರಿಸುವುದನ್ನು ನೋಡಿ, ಪಿಶಾಚಿಗೆ ಬಹಳ ಕೋಪ ಬಂದಿತು. ಆದೆಂಥವನೋ ದಬ್ಬಣದೋರ್ದಂಡ! ನೋಡಬೇಕೆಂದು ತೋರಿತು ಪಿಶಾಚಿಗೆ.

"ನನಗೆ ಆ ದಬ್ಬಣದೋರ್ದಂಡನನ್ನು ಈಗಲೇ ತೋರಿಸು" ಎಂದಿತು ಪಿಶಾಚಿ.



"ಅವನು ಊರದಾರೀ ಮೇಲೆ ಹೊಂಚಿ ಕೊಂಡಿರುತ್ತಾನೆ. ಬೇಕಾದರೆ ನನ್ನ ಗೋಣೀಚೀಲ ದಲ್ಲಿ ನಿನ್ನನ್ನು ಮೂಟೆಕಟ್ಟಿ ದಬ್ಬಣದೋರ್ದಂಡನ ಹತ್ತಿರ ಹೊತ್ತುಕೊಂಡು ಹೋಗುತ್ತೇನೆ. ನೀನು ಮಾತ್ರ ಗೋಣೀ ಚೀಲದ ಸಂದಿನಿಂದ ನೋಡ ಬೇಕೇ ಹೊರತು ಉಸಿರೆತ್ತಿ ಸ್ವರ ಹೊರಡಿಸಿ ಬಿಡ ಬೇಡ" ಎಂದನು ವರ್ತಕ.

ಅವನು ತನ್ನ ಗೋಣಿಯೊಳಗಿದ್ದ ಸರಕುಗಳನ್ನೆಲ್ಲಾ ಕೆಳಗೆ ಸುರಿದು ಪಿಶಾಚಿಯನ್ನು ಅದರೊಳಗೆ ಕುಳ್ಳಿರಿಸಿ ಬಾಯಿ ಬಿಗಿದು ಕಟ್ಟಿ ಹೆಗಲಲ್ಲೇರಿಸಿಕೊಂಡು ಬೀದಿಯ ಕಡೆಗೆ ಹೋದನು. ಹೋಗುತ್ತಾ ಸುಂಕದ ಕಟ್ಟೆದಾಟಿ ಏನೂ ತಿಳಿಯದವನಂತೆ ಮುಂದೆ ಸಾಗಿದಾಗ "ಏಯ್! ನಿಲ್ಲಲ್ಲಿ! ಏನಿದೆ ಮೂಟೆಯಲ್ಲಿ?" ಎಂದು ಸುಂಕವಸೂಲು ಮಾಡುವವನು ಕೇಳಿದನು.

ವರ್ತಕನು ಮೂಟೆ ಕೆಳಗಿಳಿಸಿ "ಹುಣಿಸೇ ಹಣ್ಣು ಅಯ್ಯಾ" ಎಂದನು.

ಸುಂಕದ ಅಧಿಕಾರಿ ಮೂಟೆಯ ಮೇಲೆ ಚಪಟಪನೆ ಕೋಲಿನಿಂದ ಬಡಿದನು, ದಬ್ಬಣದಿಂದ ನಾಲ್ಕಾರು ಕಡೆಗಳಲ್ಲಿ ಚೀಲದೊಳಗೆ ಚುಚ್ಚಿದನು, "ಉಂ. ಹುಣಿಸೇಹಣ್ಣಿನ ಹಾಗೇ ಇದೆ. ನಾಲ್ಕು ಪಾವಲಿ ಸುಂಕ ಕಟ್ಟಿ ಹೋಗು, ಒಂದು ಹೊರೆ ಭರ್ತಿ ಇದೆಯಲ್ಲ!" ಎಂದನು.

ವರ್ತಕನು ಒಂದು ರೂಪಾಯಿ ಕೊಟ್ಟು, ಮತ್ತೊಂದು ದಾರಿಯಿಂದ ತಾನು ಕಾಡಿನಲ್ಲಿ ಸರಕು ಗಳನ್ನು ಸುರಿದಿಟ್ಟಲ್ಲಿಗೆ ಹೋಗಿ, ಗೋಣೀ ಚೀಲದ ಬಾಯಿಬಿಚ್ಚಿ ಪಿಶಾಚಿಯನ್ನು ಬಿಡುಗಡೆ ಮಾಡಿದನು. "ನೋಡಿದೆಯಾ ದಬ್ಬಣದೋರ್ದಂಡನ ಪ್ರತಾಪ? ನಾನು ರೂಪಾಯಿ ಕೊಟ್ಟದ್ದರಿಂದಲೇ ನೀನು ಪ್ರಾಣ ದಿಂದ ಉಳಿದೆ. ಇಲ್ಲದಿದ್ದರೆ ಇನ್ನೂ ಇನ್ನೂ ಆಳಕ್ಕೆ ತಿವಿಯುತ್ತಿದ್ದನು." ಎಂದನು ವರ್ತಕ.

"ಅಬ್ಬ! ತಿವಿದು ಕೊಂದನು. ನೀನು ಹುಣಿಸೆ ಹಣ್ಣೆಂದು ಸುಳ್ಳು ಹೇಳಿದ್ದರಿಂದ ಬದುಕಿದೆನು, ನಿನಗೇ ನಾದರೂ ಉಪಕಾರವಾಗಬೇಕಾದರೆ ಹೇಳು. ಮಾಡುತ್ತೇನೆ" ಎಂದಿತು ಪಿಶಾಚಿ.

"ನನ್ನದು ದೊಡ್ಡ ಕುಟುಂಬ. ಸಾಧ್ಯವಾದರೆ ಹಣ ಬೇಕಿತ್ತು" ಎಂದನು ವರ್ತಕ.

"ಅಷ್ಟೇ ತಾನೇ? ಈ ಮರದ ಬುಡದಲ್ಲಿ ತುಂಬಾ ಧನವು ಹುಗಿದಿಡಲ್ಪಟ್ಟಿದೆ. ತೆಗೆದುಕೊಂಡು ಹೋಗು" ಎಂದು ಹೇಳಿ ಪಿಶಾಚಿ ಮರದ ಮೇಲೆ ಹಾರಿ ಮಾಯವಾಯಿತು.

ವರ್ತಕನು ಮರದ ಅಡಿಯಲ್ಲಿರುವ ಹೇರಳವಾದ ನಿಧಿಯನ್ನು ಅಗೆದು ತೆಗೆದುಕೊಂಡು ಗೋಣೀ ಚೀಲ ದಲ್ಲಿ ತುಂಬಿಸಿ ಕಟ್ಟಿ ಮನೆಗೆ ತಂದನು. ಆ ಧನದಿಂದ ಅವನ ಜೀವನವು ಸುಖಮಯವಾಗಿ ಚೆಂದಾಯಿತು.





# ಭ್ರಮೆ ಬಿಟ್ಟಿತು

ಒಂದು ಊರಿನಲ್ಲಿ ಆದಿತ್ಯನೆಂಬ ಯುವಕನಿದ್ದನು, ಅವನು ಸಹಜವಾಗಿಯೇ ಧೈರ್ಯಶಾಲಿ. ಅಂತಲೇ ಅವನು ಪ್ರತಿದಿನಾ ರಾತ್ರಿ ಊಟವಾದ ಮೇಲೆ, ಊರ ಹೊರಗಿನ ಕೆರೆಯ ಕಟ್ಟೆಯವರೆಗೆ ನಡೆದು ಮಧ್ಯ ರಾತ್ರಿಯ ಹೊತ್ತಿಗೆ ಮನೆಗೆ ಹಿಂದಿರುಗುವನು, ಆ ದಾರಿಯಲ್ಲೇ ಸ್ಮಶಾನವಿದ್ದಿತು. ಆದರೂ ಅವನಿಗೆ ದೆವ್ವ ಭೂತಗಳೆಂದರೂ ಭಯವಿರಲಿಲ್ಲ. ಬೆಳದಿಂಗಳೂ ಕತ್ತಲೆಯೂ ಅವನಿಗೆ ಒಂದೇ ಆಗಿತ್ತು.

ಒಂದು ದಿನ ರಾತ್ರಿ ಅವನು ಎಂದಿನಂತೆ ಕೆರೆಯ ಕಟ್ಟೆಯವರೆಗೆ ಹೋಗಿ, ಸುಮಾರು ನಡುರಾತ್ರಿಯಲ್ಲಿ ಹಿಂದಿರುಗಿ ಬರುವಾಗ, ಸ್ಮಶಾನದ ಸಮೀಪದಲ್ಲಿ ಯಾರೋ ಕಪ್ಪಗಿನ ಇಬ್ಬರು ಗಟ್ಟಿಯಾಗಿ ವಾದವಿವಾದ ಮಾಡುತ್ತ ಜಗಳಾಡಿಕೊಂಡಿರುವುದು ಕಂಡಿತು.

ಅದೇನು ವಿಷಯವೆಂದು ತಿಳಿದುಕೊಳ್ಳುವ ಕುತೂಹಲದಿಂದ ಆದಿತ್ಯನು ಅಲ್ಲಿಗೇ ನಡೆದು, ತುಸುದೂರದಲ್ಲೇ ನಿಂತು, " ಈ ಅರ್ಧರಾತ್ರಿಯ ಹೊತ್ತಿನಲ್ಲಿ ಅದೇನು ನಿಮ್ಮ ಜಗಳ ?" ಎಂದು ಕೇಳಿದನು.

ಕೂಡಲೇ ವಾದ ವಿವಾದ ಮಾಡುವವರಲ್ಲಿ ಒಬ್ಬನು "ಯಾವನೋ ಮನುಷ್ಯ ಬಂದಿದ್ದಾನೆ. ಇಂಥಾ ರಾತ್ರಿಯಲ್ಲಿ ಈ ಸ್ಥಳಕ್ಕೆ ಒಂಟಿಯಾಗಿ ಬಂದಿದ್ದಾನೆಂದರೆ, ಅವನು ಒಳ್ಳೇ ಧೈರ್ಯವಂತನಾಗಿರಬೇಕು. ಮನುಷ್ಯರಿಗೆ ನಮಗಿಂತ ಹೆಚ್ಚಿಗೇ ಬುದ್ಧಿವಂತಿಕೆ ಇದೆಯೆಂದು ಹೇಳುತ್ತಾರೆ. ನಡೆ, ನಮ್ಮ ವಾದವನ್ನು ಅವನ ಮುಂದಿಡೋಣ. ನಮಗಿಬ್ಬರಿಗೂ ಒಪ್ಪಿಗೆಯಾಗುವಂತೆ ಸರಿಯಾಗಿ ಹೇಳುತ್ತಾನೋ ನೋಡೋಣ " ಎಂದನು.

ಅಷ್ಟರಲ್ಲಿ ಆದಿತ್ಯನೂ ಅವರನ್ನು ಸಮೀಪಿಸಿದನು. ಎರಡು ಕಪ್ಪಗಿನ ಆಕಾರಗಳು ಗಬಗಬನೆ ಅವನ ಮುಂದೆ ಬಂದು ನಿಂತುವು. ಅವು ದೆವ್ವಗಳು ! ಆದಿತ್ಯನು ಒಂದು ಕ್ಷಣ ಬೆಚ್ಚಿದನು. ಆ ಕೂಡಲೇ ಧೈರ್ಯ ತಂದುಕೊಂಡು, " ಓ ! ದೆವ್ವಗಳೇನು ? ನೀವೇ ಏನು ಜಗಳಾಡಿಕೊಳ್ಳುತ್ತಾ ಇದ್ದದ್ದು ? " ಎಂದು ಕೇಳಿದನು.

" ಹೌದೌದು ನಾವೇ. ನಮ್ಮನ್ನು ನೋಡಿ ನಿನಗೆ ಭಯವಾಗುವುದಿಲ್ಲವೆ ? ನಾವು ಯಾರು ಗೊತ್ತಾ ? ದೆವ್ವಗಳು ! " ಎಂದಿತು ಒಂದು ಆಕಾರ.

ಎಂ. ಕೆ. ಈಶ್ವರ ರಾವ್



ಆದಿತ್ಯನಿಗೆ ಮನಸ್ಸಿನೊಳಗೆ ಭಯವು ತಲೆ ಹಾಕಿದರೂ ಮೇಲಿನಿಂದ ಬಹಳ ಧೀರನಂತೆ, "ಅದು ನೀವು ಹೇಳದೆಯೇ ಗೊತ್ತಾಗುತ್ತದೆ. ತಪ್ಪು ಮಾಡಿದವರಿಗೇ ಭಯವಲ್ಲದೆ ನನಗೇನು ಭಯ ? ಚಿಕ್ಕಪ್ರಾಯದಲ್ಲಿ ನಿಮ್ಮಂಥವರನ್ನು ಬೈಲಾಟದಲ್ಲಿ ನೋಡಿದ್ದೇನೆ. ಈಗ ಸ್ಮಶಾನದ ಹತ್ತಿರ ನೋಡುತ್ತಿದ್ದೇನೆ. ನ್ಯಾಯವಾಗಿ ನಡೆಯುವವರಿಗೆ ದೆವ್ವ ದೇವರುಗಳೇನೂ ಮಾಡಲಾರರು." ಎಂದನು.

"ಭೇಷ್ ! ನಿನ್ನ ಧೈರ್ಯವನ್ನು ಮೆಚ್ಚಲೇ ಬೇಕು. ನಿನ್ನ ನ್ಯಾಯ ಬುದ್ಧಿಯೂ ದೊಡ್ಡದೇ ! ನಮ್ಮ ನಂಬುಗೆ ಸುಳ್ಳಾಗದು. ಈಗ ನಮ್ಮ ತಗಾದೆಯೊಂದನ್ನು ನೀನು ತೀರಿಸು ನೋಡುವಾ" ಎಂದಿತು ಒಂದು ದೆವ್ವ.

"ಏನದು ತಗಾದೆ ?" ಎಂದು ಕೇಳಿದನು ಆದಿತ್ಯ.

"ಇಲ್ಲಿಗೆ ಹತ್ತಿರದಲ್ಲಿರುವ ಒಂದು ಮನೆಯ ಮೇಲಿನ ಬಿಸಿಲು ಮಚ್ಚಿನಲ್ಲಿ ಅಪ್ಸರೆಯಂಥವಳೊಬ್ಬಳು ನಿದ್ರಿಸಿಕೊಂಡಿದ್ದಾಳೆ. ಅವಳ ಮೈ ಬಣ್ಣ ಅಪ್ಪಟ ಬಂಗಾರದ್ದು ಅಂತ ನಾನು ಹೇಳುತ್ತೇನೆ. ಇವನು, ಅಲ್ಲ ಗುಲಾಬೀ ರಂಗು ಅನ್ನುತ್ತಾನೆ. ಇದೇ ನಮ್ಮೊಳಗಿನ ವಾದ. ನೀನು ಆ ಹುಡುಗಿಯನ್ನು ಸ್ವಯಂ ನೋಡಿ ನಮ್ಮಿಬ್ಬರಲ್ಲಿ ಯಾರ ಮಾತು ನಿಜ ಎಂಬುದನ್ನು ಹೇಳಬೇಕು. ನೀನು ಹೇಳುವ ಮಾತನ್ನು ನಾವಿಬ್ಬರೂ ಒಪ್ಪಬೇಕೆಂದು ನಿಶ್ಚಯಿಸಿದ್ದೇವೆ. ಈಗ ನಮ್ಮೊಂದಿಗೆ ಅಲ್ಲಿಗೆ ಬಾ." ಎಂದುವು ಆ ದೆವ್ವಗಳು.

ತಾನು ಸುಮ್ಮನೆ ಈ ದೆವ್ವಗಳ ಗೊಡವೆಯಲ್ಲಿ ಏಕೆ ಸಿಕ್ಕಿಕೊಂಡೆನೋ ಎಂದು ಆದಿತ್ಯನಿಗೆ ತೋರಿತು. ಸಾಧ್ಯವಿಲ್ಲವೆನ್ನಲು ಧೈರ್ಯ ಸಾಲದೆ, ಬೇರೆ ಉಪಾಯವಿಲ್ಲದೆ ಆದಿತ್ಯನು ಸರಿ ಎಂದು ತಲೆಯಾಡಿಸಿದನು.

ದೆವ್ವಗಳು ಅವನನ್ನು ಒಂದು ಮನೆಯ ಹತ್ತಿರ ಕರೆದುಕೊಂಡು ಹೋದುವು. ಪಕ್ಕದಲ್ಲಿರುವ ಮರವನ್ನೇರಿ ಬಿಸಿಲು ಮಚ್ಚಿಗೆ ತಾಗಿಕೊಂಡಿರುವ ಕೊಂಬೆಯ ಮೂಲಕ ಹೋಗಿ ನೋಡಿ ಬರುವಂತೆ ಆ ದೆವ್ವಗಳು ಅವನಿಗೆ ಹೇಳಿದುವು. ಅವನೂ ಹಾಗೆಯೇ ಮರದ ಮೇಲೆ ಹತ್ತಿ ಅಲ್ಲಿಂದ ಚಾಚಿಕೊಂಡಿದ್ದ ಕೊಂಬೆಯ ಮೂಲಕವಾಗಿ ಬಿಸಿಲು ಮಚ್ಚಿನಲ್ಲಿ ಇಳಿದನು.

ಚಂದ್ರನ ಮಂದ ಕಿರಣದ ಕಾಂತಿಯಲ್ಲಿ ಅಲ್ಲಿ ಮಂಚದ ಮೇಲೆ ಮಲಗಿರುವ ಹುಡುಗಿಯನ್ನು ನೋಡಿ ಆದಿತ್ಯನು ಅತ್ಯಾಶ್ಚರ್ಯದಲ್ಲಿ ಮುಳುಗಿ ಹೋದನು. ಅಷ್ಟೊಂದು ಸುಂದರಿಯಾದವಳನ್ನು ಅವನು ಆದುವರೆಗೂ ನೋಡಿರಲಿಲ್ಲ. ಮದುವೆ ಮಾಡಿಕೊಂಡರೆ ಅವಳನ್ನೇ ಮಾಡಿಕೊಳ್ಳಬೇಕೆಂದು ಅಂದುಕೊಂಡನು.

ಆದಿತ್ಯನು ಅವಳನ್ನು ರೆಪ್ಪೆಬಡಿಯದೆ ನೋಡುತ್ತಿರುವಾಗ, ಅವನ ಹಿಂದೆಯೇ ಬಂದಿದ್ದ ದೆವ್ವ

ಗಳೆರಡೂ ಮರದ ಕೊಂಬೆಯ ಮೇಲೆ ಹಾರಿ ಹಿಂದೆ ಹೋದುವು. ಆಗ ಆದ ಶಬ್ದಕ್ಕೆ ಆ ಹುಡುಗಿಗೆ ಎಚ್ಚರವಾಗಿ ಕಣ್ಣು ತೆರೆದು ಆದಿತ್ಯನನ್ನು ನೋಡಿ ಕಿಟ್ಟನೆ ಕಿರುಚುತ್ತಾ ತಟಕ್ಕನೆ ಎದ್ದು ಕುಳಿತು ದೊಡ್ಡ ಕಣ್ಣುಗಳಿಂದ ಅವನನ್ನೇ ನೋಡಿದಳು.

ಆದಿತ್ಯನು ನಗುತ್ತ, "ಹೆದರಬೇಡ. ನಾನು ಕಳ್ಳನಲ್ಲ. ದೆವ್ವವೂ ಅಲ್ಲ. ಯಾವ ದುರ್ಬುದ್ಧಿಯಿಂದ ಬಂದವನೂ ಅಲ್ಲ" ಎಂದನು.

"ಹಾಗಾದರೆ ಈ ನಡುರಾತ್ರಿಯಲ್ಲಿ ಹೀಗೆ ಬಂದಿರುವೆಯಲ್ಲ? ನನ್ನ ಹತ್ತಿರ ಈ ಹೊತ್ತಲ್ಲದ ಹೊತ್ತಿನಲ್ಲಿ ನಿನಗೇನು ಕೆಲಸ?" ಎಂದು ಆ ಹುಡುಗಿ ಕೋಪದಿಂದ ಕೇಳಿದಳು.

ಆದಿತ್ಯನು ತಾನು ಅಲ್ಲಿಗೆ ಬರಲು ಕಾರಣವೇನೆಂಬುದನ್ನು ಅವಳಿಗೆ ಹೇಳಿ, "ಆ ದೆವ್ವಗಳು ಹೇಳಿದುವುಗಳಲ್ಲಿ ಸುಳ್ಳು ಯಾವುದೂ ಇಲ್ಲ. ಅದಕ್ಕಾಗಿ ನಾನು ಬಂದರೂ ಈಗ ನಿನ್ನನ್ನು ನೋಡಿದ ಮೇಲೆ ನನ್ನ ಭಾವನೆಯನ್ನೂ ಹೇಳಿಬಿಡುತ್ತೇನೆ. ನಿನ್ನ ಸೌಂದರ್ಯಕ್ಕೆ ಎಣೆಯೇ ಇಲ್ಲ. ನಾನು ಇಲ್ಲಿ ಒಳ್ಳೆಯ ಉದ್ಯೋಗದಲ್ಲಿರುವವನು. ನಾನು ನಿನ್ನನ್ನೇ ಮದುವೆಯಾಗಬೇಕೆಂದು ಮಾಡಿದ್ದೇನೆ. ಬೆಳಗಾದ ಮೇಲೆ ಬಂದು ನಿಮ್ಮವರ ಹತ್ತಿರ ಮಾತಾಡುತ್ತೇನೆ. ಅದಕ್ಕಿಂತ ಮೊದಲು ನಿನ್ನ ಒಪ್ಪಿಗೆ ತುಂಬ ಮುಖ್ಯ. ನನ್ನನ್ನು ಒಪ್ಪುವಿಯಾ?" ಎಂದು ಕೇಳಿದನು.

ಆ ಮಾತು ಕೇಳಿ ಅವಳು ಕೋಪದಿಂದ ಕಣ್ಣು ತಿರುಗಿಸಿ, ಹಲ್ಲು ಕಡಿಯುತ್ತ, "ಎಷ್ಟು ಗರ್ವವಿದ್ದರೆ ಹೀಗೆ ಹೇಳುವಿ? ನನ್ನನ್ನು ಮದುವೆಯಾಗುವ ಮೂತಿಯೋ ನಿನ್ನದು? ನನ್ನ ಚಂದ ನೋಡಿದ ಮೇಲೆ ಹೀಗೆ ಹೇಳಲು ನಿನಗೇನು ಯೋಗ್ಯತೆ ಇದೆ ಮಹಾ? ನಿನಗೆ ತಕ್ಕ ಶಾಸ್ತಿಯಾಗಲೇ ಬೇಕು. ಸುಮ್ಮನೆ ಬಿಡುವೆನೆಂದು



ಕೊಂಡೆಯಾ?" ಎಂದು ನಿಂದಿಸಿ ಗಟ್ಟಿಯಾಗಿ "ಅಣ್ಣಾ! ಓ ಅಣ್ಣಾ! ಕಳ್ಳ! ಕಳ್ಳ! ಓಡಿ ಬಾ!" ಎಂದು ಕೂಗಿದಳು.

ಅವಳ ಮಾತುಗಳು ಆದಿತ್ಯನ ಗುಂಡಿಗೆಗೆ ಶೂಲದ ತಿವಿತಗಳಾದುವು. ಅವಮಾನದಿಂದ ಕಂದಿ ಹೋದನು. ಓಡಲಿಕ್ಕೂ ಕಾಲೇಳಲಿಲ್ಲ. ತಾನೇಕೆ ದೆವ್ವಗಳನ್ನು ಮಾತಾಡಿಸಬೇಕು? ಅವುಗಳೊಂದಿಗೆ ಇಲ್ಲಿಗೇಕೆ ಬರಬೇಕು? ಎಂದುಕೊಂಡು ತನ್ನನ್ನು ನಿಂದಿಸಿಕೊಂಡನು.

ಅಷ್ಟರಲ್ಲಿ ವಸ್ತಾದಿಯಂತಿದ್ದ ಒಬ್ಬನು ದುಂಡು ದೊಣ್ಣೆ ಹಿಡಿದುಕೊಂಡು "ಎಲ್ಲಿ, ಎಲ್ಲಿ ಕಳ್ಳ?" ಎನ್ನುತ್ತಾ ಅಲ್ಲಿಗೆ ಬಂದು ಆದಿತ್ಯನನ್ನು ನೋಡಿ, "ಕಳ್ಳಕೊರಮಾ! ಇಲ್ಲಿಂದ ಎತ್ತಿ ನೆಲಕ್ಕೆ ಬೀಸಿ ಒಗೆದು ಬಿಡುತ್ತೇನೆ. ಆದರೆ ಸಿಕ್ಕಿಬಿದ್ದವನನ್ನು ಕೊಲ್ಲಲು ಮನಸ್ಸೊಪ್ಪುವುದಿಲ್ಲಾಂತ ಸುಮ್ಮನಿದ್ದೇನೆ. ಈಗ ನಿನ್ನನ್ನು ಕತ್ತಲೆ ಕೋಣೆಗೆ ಹಾಕುತ್ತೇನೆ. ಬೆಳಗಾದ



ಮೇಲೆ ಹತ್ತು ಮಂದಿಯ ಮುಂದೆ ನಿಲ್ಲಿಸಿ ತಕ್ಕ ಬುದ್ಧಿ ಪಾಠ ಹೇಳುತ್ತೇನೆ" ಎಂದನು.

ಆದಿತ್ಯನು ಅವಮಾನದಿಂದಲೂ ಭಯದಿಂದಲೂ ಸ್ವರವು ಗದ್ಗದಿಸಲು, "ನಾನು ಕಳ್ಳನಲ್ಲ, ಸತ್ಯವಾಗಿಯೂ ಕಳ್ಳನಲ್ಲ! ಸುಮ್ಮನೆ ನನ್ನನ್ನು ಹಿಂಸಿಸಬೇಡಿರಪ್ಪಾ! ಬಿಟ್ಟುಬಿಡಿರಪ್ಪಾ!" ಎಂದನು.

ಈ ಸಾರಿ ಹುಡುಗಿ ನಗುತ್ತ "ಕಳ್ಳನು ನಿಜ ಹೇಳಿದ್ದೂ ನಾನು ಕೇಳಿಲ್ಲ. ಇವನಂಥ ಕುರೂಪಿಯನ್ನೂ ನಾನು ನೋಡಿದ್ದಿಲ್ಲ. ಆ ಎರಡೂ ಜೋಡಿಯಾಗಿ ಇವನಲ್ಲಿ ಕೂಡಿಕೊಂಡಿದೆ! ಬುದ್ಧಿ ಬರುವ ಹಾಗೆ ಮಾಡಿಬಿಡು ಅಣ್ಣಾ!" ಎಂದು ಜೋರಾಗಿ ನಕ್ಕಳು.

ವಸ್ತಾದಿ ಅವನ ಕೈ ಹಿಡಿದು ಮೆಟ್ಟಲಿಳಿಸಿಕೊಂಡು ಕೆಳಗೆ ಒಯ್ದು, ಒಂದು ಕತ್ತಲೆ ಕೋಣೆಯೊಳಗೆ ಅವನನ್ನು ದೂಡಿ, ಬಾಗಿಲು ಹಾಕಿ ಚಿಲಕ ಸಿಕ್ಕಿಸಿ ಅತ್ತ ಹೋದನು.

ನಡೆದುದೆಲ್ಲಾ ಒಂದು ಕನಸಿನಂತೆ ತೋರಿತು ಆದಿತ್ಯನಿಗೆ. ಉಳಿದ ರಾತ್ರಿಯಲ್ಲಿ ಅವನಿಗೆ ನಿದ್ದೆಯೇ ಬರಲಿಲ್ಲ. ದೂರದಲ್ಲಿ ಕೋಳಿಯ ಕೂಗೂ, ಸಮೀಪದಲ್ಲಿ ಕಾಗೆಗಳ ಅರಚುವಿಕೆಗಳೂ ಕೇಳ ತೊಡಗಲು ಬೆಳಗಾಗುತ್ತಿರುವುದು ತಿಳಿಯಿತು. ಬೆಳಗಾಯಿತೆಂದು ಸಂತೋಷಕ್ಕೆ ಬದಲು, ಇನ್ನೇನಾಗುವುದೋ ಎಂದು ಭಯಪಡತೊಡಗಿದನು.

ಅವನು ಬುದ್ಧಿವಂತನಾದವನ ಹಾಗೆ ಬಾಗಿಲ ಹತ್ತಿರ ಬಂದು, "ಬೆಳಗಾದ ಹಾಗಿದೆಯಲ್ಲಾ? ಓಯ್! ಬಾಗಿಲು ತೆಗೆರಿ. ನಾನು ಕಳ್ಳನಲ್ಲಾ!" ಎಂದು ಗಟ್ಟಿಯಾಗಿ ಕೂಗತೊಡಗಿದನು.

ಸ್ವಲ್ಪ ಹೊತ್ತಿಗೆ ಬಾಗಿಲು ತೆರೆಯಲ್ಪಟ್ಟಿತು. ಹಾಗೆ ತೆರೆದವರನ್ನು ನೋಡಿ ಆದಿತ್ಯನಿಗೆ ಆಶ್ಚರ್ಯವಾಯಿತು. ಏಕೆಂದರೆ, ಬಾಗಿಲು ತೆರೆದುದು ಆ ಸುಂದರೀಮಣಿಯಾದ ಹುಡುಗಿಯಲ್ಲ. ಅವಳ ಅಣ್ಣ ವಸ್ತಾದಿಯೂ ಅಲ್ಲ. ಯಾರೋ ನಾಲ್ಕು ಮಂದಿ ಕೂಲೀ ಕೆಲಸದವರು.

ಆದಿತ್ಯನು ಕತ್ತಲೆ ಕೋಣೆಯಿಂದ ಹೊರಗೆ ಬಂದ ಕೂಡಲೇ ಆ ಕೆಲಸದಾಳುಗಳು ಆಶ್ಚರ್ಯದಿಂದ ಅವನನ್ನು ನೋಡುತ್ತ, "ಎಲ! ಎಂದೋ ಪಾಳು ಬಿದ್ದು ಹೋಗಿದ್ದ ಈ ದೆವ್ವಗಳ ಕೊಂಪೆ ಮನೆಯೊಳಗೆ ನೀನು ಹೇಗೆ ಬಂದೆ? ಪುಣ್ಯಕಾಲ! ಅವು ನಿನ್ನನ್ನು ಕಿತ್ತು ಕಚ್ಚಿ ತಿನ್ನಲಿಲ್ಲ!" ಎಂದರು.

ಆದಿತ್ಯನು ತಲೆ ತಗ್ಗಿಸಿಕೊಂಡು ತನ್ನ ಮನೆಗೆ ಹೋಗಿ ಸೇರಿದನು. ಅವನಿಗೆ ತನ್ನನ್ನು ಅಷ್ಟೊಂದು ಅವಮಾನಕ್ಕೆ ಗುರಿ ಪಡಿಸಿದ ಎರಡು ದೆವ್ವಗಳ ಮೇಲೆ ಹೇಗೆ ಹಗೆ ತೀರಿಸುವುದೆಂದು ಕರಕರ ಹಲ್ಲು ಕಡಿದನು.

ಆ ದಿನ ರಾತ್ರಿ ಸ್ವಲ್ಪ ಹೊತ್ತಾದ ಮೇಲೆ, ದಪ್ಪವಾದೊಂದು ದೊಣ್ಣೆ ತೆಗೆದುಕೊಂಡು ಕಳೆದ ರಾತ್ರಿ ದೆವ್ವಗಳು ಕಾಣಿಸಿದ ಸ್ಥಳಕ್ಕೆ ಹೋದನು.



ದೆವ್ವಗಳೆರಡೂ ಅಲ್ಲಿ ಕುಳಿತುಕೊಂಡಿದ್ದುವು. ಅವು ಆದಿತ್ಯನನ್ನು ನೋಡಿದ ಕೂಡಲೇ ಹೊಟ್ಟೆ ಹುಣ್ಣಾಗುವಂತೆ ನಗಲು ತೊಡಗಿ, "ನೀನು ಇಲ್ಲಿಗೆ ಬರುವಿ ಎಂದು ನಮಗೆ ಗೊತ್ತಿದೆ. ಯಾಕೆ ಬರುವಿಯೆಂಬುದನ್ನೂ ನಾವು ಬಲ್ಲೆವು. ನಿನ್ನಂಥವರು ಹಿಡಿದಿರುವ ದೊಣ್ಣೆ ಕೋಲು ಬಾಣ ಕಡ್ಡಿಗಳೆಲ್ಲ ನಮಗೆ ಹಿಡಿಗಡ್ಡಿಗೆ ಸಮಾನ!" ಎಂದುವು.

"ಹಾಗೋ! ಆ ಸಂಗತಿ ಆಮೇಲೆ ತಿಳಿಯುತ್ತದೆ. ರಾತ್ರಿಯಲ್ಲಿ ನೀವಿಬ್ಬರೂ ಮತ್ತೆ ಕೆಲವು ದೆವ್ವಗಳೂ ಸೇರಿ ಅಷ್ಟು ದೊಡ್ಡ ಮಾಯದ ನಾಟಕ ಏಕೆ ಆಡಿದಿರಿ? ನನಗೆ ಅವಮಾನವನ್ನೂ, ಶರೀರ ಕಷ್ಟವನ್ನೂ ಕೊಟ್ಟಿರಲ್ಲಾ, ಏಕೆ? ನಾನೇನು ತಪ್ಪು ಮಾಡಿದೆ? ಉತ್ತರ ಕೊಡಿರಿ. ಇಲ್ಲದಿದ್ದರೆ ನಾನು ಸುಮ್ಮನಿರಲಾರೆ!" ಎಂದು ಕೇಳಿ ಆದಿತ್ಯನು ದೊಣ್ಣೆಯನ್ನು ಎತ್ತಿ ಭುಜಕ್ಕಿಟ್ಟುಕೊಂಡನು.

ದೆವ್ವಗಳು ಎರಡಡಿ ಹಿಂದಕ್ಕಿಟ್ಟು, "ಅದು ಸಾಧಾರಣ ನಾಟಕವಲ್ಲ. ನಿನಗೆ ಬುದ್ಧಿ ಕಲಿಸಲಿಕ್ಕಾಗಿ ಆ ಕೆಲಸ ಮಾಡಿದೆವು. ಅಂಜಲಿ ಯಾರೆಂದು ಗೊತ್ತಿದೆಯಷ್ಟೆ? ಆ ಹುಡುಗಿಯ ಊರಿನಿಂದ ಅದಕ್ಕಾಗಿಯೇ ಇಲ್ಲಿಗೆ ಬಂದೆವು," ಎಂದುವು.

"ಅಂಜಲಿಯೋ? ಅವಳು ನನ್ನ ಸೋದರ ಮಾವನ ಮಗಳು. ಅವಳಿಗೂ ನಿಮಗೂ ಏನು ಸಂಬಂಧ? ಏನು ಹೇಳುವಿರಿ ನೀವು?" ಎಂದನು ಆದಿತ್ಯ ತುಸು ಅಪ್ರತಿಭನಾಗಿ.

"ಆ ಹುಡುಗಿಯ ಹೆಸರು ನೆನಪಿದೆಯೆಂದಾಯಿತು. ಮೊದಲು ನೀನು ಆ ಹುಡುಗಿಯನ್ನು ಒಪ್ಪಿದವನು ತಾನೆ? ಅವಳೊಂದಿಗೆ ನಿನ್ನ ಮದುವೆ ಯಾವಾಗಲೋ ನಿಶ್ಚಯವಾದ ಸಂಗತಿ. ನಿನಗೆ ಉದ್ಯೋಗ ದೊರೆತು ಈ ಪಟ್ಟಣಕ್ಕೆ ಬಂದು ಸೇರಿದ ಮೇಲೆ, ಇಲ್ಲಿಯ ನಾಲ್ಕಾರು ಸುಂದರ ಒಯ್ಯಾರಿಗಳನ್ನು ನೋಡಿದ ಮೇಲೆ ಅಂಜಲಿ ನಿನ್ನ ದೃಷ್ಟಿಯಲ್ಲಿ ಕುರೂಪಿಯಾದಳು, ಅವಳನ್ನು ಮದುವೆಯಾಗಲಾರೆನೆಂದು ಹೇಳಲು ಅದೇ ಕಾರಣ. ಹೌದಾ?" ಎಂದುವು ದೆವ್ವಗಳು.

ಆದಿತ್ಯನು ಉತ್ತರ ಕೊಡಲು ಏನೂ ತೋರದೆ ತಲೆ ತಗ್ಗಿಸಿಕೊಂಡನು. ದೆವ್ವಗಳೆರಡೂ ವಿಕಟವಾಗಿ ನಕ್ಕು, "ನಿನ್ನ ಚೆಂದ ಎಷ್ಟರ ಮಟ್ಟಿನದೆಂದು ರಾತ್ರಿ ಆ ಸುಂದರ ಹುಡುಗಿ ಹೇಳಿದಳಷ್ಟೆ? ಒಂದು ವಾರದ ಕೆಳಗೆ ಮದುವೆಯ ಸಂಗತಿ ಮಾತಾಡಲು ಬಂದ ನಿನ್ನ ಸೋದರ ಮಾವನ ಹತ್ತಿರ ಅಂಜಲಿ ಚೆಂದವಿಲ್ಲ, ಅವಳನ್ನು ಮದುವೆಯಾಗಲಾರೆನೆಂದು ಸ್ಪಷ್ಟವಾಗಿ ಹೇಳಿದಿ, ಪಾಪ, ಆಗ ಅವರಿಗೆ, ಮುಖ್ಯವಾಗಿ ಆ ಹುಡುಗಿಯ ದುಃಖ ಎಷ್ಟು ಅಂತ ಅಳತೆ ಮಾಡಿದಿಯಾ?" ಎಂದುವು.

ಇಷ್ಟು ಮಾತು ಕೇಳಿದ ಮೇಲೆ ಇತ್ತೀಚೆಗೆ ಅವನಿಗೆ ಅಂಟಿಕೊಂಡ ಭ್ರಮೆ ಬಿಟ್ಟು ಹೋಯಿತು, ಎಲ್ಲರೂ ಅಲ್ಲದಿದ್ದರೂ ಕೆಲವು ಸುಂದರಿಯರಾಗಿರು

ವವರ ಗುಣ ರಾಕ್ಷಸಿಯದೇ. ಹಾಗೆಯೇ ಕೆಲವು ಕುರೂಪಿಯರ ಮನಸ್ಸು ದೇವತೆಯ ಗುಣದಿಂದ ತುಂಬಿರುತ್ತದೆ. ತಾನು ಅಂತಹ ತಪ್ಪೇನೂ ಮಾಡ ದಿದ್ದರೂ ಬಿಸಿಲು ಮಚ್ಚಿನ ಮೇಲಿನ ಸುಂದರಿ ತನ್ನನ್ನು ಎಷ್ಟು ಅವಮಾನಪಡಿಸಿದಳು! ರಕ್ಕಸ ಗುಣದವಳು.

ಆದಿತ್ಯನು ಹೀಗೆ ಸ್ವಲ್ಪ ಹೊತ್ತು ಮಥನಗೊಂಡು, ಆ ದೆವ್ವಗಳನ್ನು ನೋಡಿ, "ನಿಮ್ಮ ಕಾರಣದಿಂದ ನಾನು ಹಗಲುಗನಸಿನಿಂದ ಹೊರಬಿದ್ದೆನು. ಮನುಷ್ಯರ ರೂಪಕ್ಕಿಂತ ಮನಸ್ಸು ಮುಖ್ಯವೆಂದು ಗೊತ್ತಾ ಯಿತು. ಗ್ರಾಮಕ್ಕೆ ಹೋಗಿ ಸೋದರಮಾವನ ಕಾಲಿಗೆ ಬಿದ್ದು, ಕ್ಷಮಿಸುವಂತೆ ಕೇಳಿಕೊಂಡು ಅಂಜಲಿಯೊಂದಿಗೆ ಮದುವೆಯಾಗಲು ಮುಹೂರ್ತವಿಡಲು ಹೇಳು ತ್ತೇನೆ" ಎಂದನು.

"ಒಳ್ಳೇ ಮಾತು ಹೇಳಿದಿ. ಇನ್ನು ನಮ್ಮ ಕೆಲಸ ತೀರಿತು. ಇನ್ನು ನಾವು ನಮ್ಮ ಬೀಳಲಿನ ಆಲದ ಮರಕ್ಕೆ ಹೋಗುತ್ತೇವೆ" ಎಂದು ದೆವ್ವಗಳೆರಡೂ ಕತ್ತಲೆಯಲ್ಲಿ ಕಲೆತು ಹೋದುವು.

ಮರುದಿನ ಆದಿತ್ಯನು ತನ್ನ ಊರಿಗೆ ಹೋಗಿ, ಸೋದರಮಾವನೊಂದಿಗೆ, ತಾನು ಅಂಜಲಿಯನ್ನು ಮದುವೆಯಾಗುವುದಾಗಿ ಹೇಳಿದನು. ಅಲ್ಲಿದ್ದವರಿ ಗೆಲ್ಲಾ ಅತ್ಯಾನಂದವಾಯಿತು.

ಹತ್ತು ದಿನಗಳನಂತರ ನಿಶ್ಚಯಿಸಲ್ಪಟ್ಟ ಶುಭ ಮುಹೂರ್ತದಲ್ಲಿ ಆದಿತ್ಯನಿಗೆ ಅಂಜಲಿಯೊಂದಿಗೆ ವಿಜೃಂಭಣೆಯಿಂದ ಮದುವೆಯಾಯಿತು. ಆ ದಿನ ರಾತ್ರಿ ಮದುವೆಗೆ ಬಂದ ಬಂಧುಬಾಂಧವರ ವಿನೋದ ಕ್ಕಾಗಿ, ಪ್ರಸಿದ್ಧ ಆಟದ ಮೇಳದವರಿಂದ ಬೈಲಾಟದ ಏರ್ಪಾಡು ಮಾಡಲಾಯಿತು.

ನಾಟಕವು ಪ್ರಾರಂಭವಾದಾಗ ಬಗೆಬಗೆಯ ವೇಷ ಗಳನ್ನು ಧರಿಸಿ ರಂಗಕ್ಕೆ ಬಂದ ಮೂವರು ಗಂಡು ಸರನ್ನೂ, ಸುಂದರವಾಗಿ ಅಲಂಕರಿಸಿಕೊಂಡು ಬಂದ ಒಬ್ಬಳು ಸ್ತ್ರೀಯನ್ನೂ ನೋಡಿ, ಆದಿತ್ಯನು ಬೆಚ್ಚಿ ಬಿದ್ದು ಸೋದರ ಮಾವನೊಂದಿಗೆ "ಮಾವಯ್ಯಾ, ಇವರು ಮನುಷ್ಯರಲ್ಲ, ದೆವ್ವಗಳು!" ಎಂದನು. ಹಿಂದೆ ತಾನು ಪಟ್ಟಣದಲ್ಲಿ ಅನುಭವಿಸಿದ ದೆವ್ವ ಗಳಾಟವನ್ನೂ ನಾಲ್ಕು ಮಾತಿನಲ್ಲಿ ಹೇಳಿದನು.

ಸೋದರಮಾವ ಮುಗುಳು ನಗುತ್ತ, "ಹೌದಪ್ಪಾ. ಆದಿತ್ಯಾ, ನೀನು ಹೇಳಿದ್ದು ನಿಜ. ಇವು ಬೈಲಾಟ ವನ್ನು ಆಡಲು ಕಲಿತಿರುವ ದೆವ್ವಗಳೇ, ಇವುಗಳ ಸಹಾಯದಿಂದಲೇ ನಾನು ನಿನ್ನ ಭ್ರಮೆ ಬಿಡಿಸಿ ಅಳಿಯನಾಗಿ ಮಾಡಿಕೊಂಡೆ" ಎಂದನು.

ಅದನ್ನು ಕೇಳಿ ಆದಿತ್ಯನಿಗೆ ಏನು ನಡೆಯಿತೆಂದು ಅರ್ಥವಾಯಿತು. ಅವನು ಸಂತೋಷದಿಂದ ತನ್ನೊಳಗೇ ನಕ್ಕನು.





# ಪ್ರಮಾಣಪತ್ರ

ಅದೊಂದು ಕಾಲದಲ್ಲಿ ಶರೋದಧರನೆಂಬೊಬ್ಬ ಯುವಕನು ಗುರುಕುಲದಲ್ಲಿ ವಿದ್ಯಾಭ್ಯಾಸ ಮುಗಿಸಿ ಕೊಂಡು ತನ್ನ ಊರಿಗೆ ಹಿಂದಿರುಗಿ ಬಂದನು. ಅವನು ಬಹಳ ಬುದ್ಧಿಶಾಲಿಯೆಂದೂ, ತನ್ನ ಪಾಡಿಗೆ ನೆಮ್ಮದಿಯಾಗಿರುವ ಗುಣದವನೆಂದೂ ಎಲ್ಲರೂ ಹೇಳುತ್ತಿದ್ದರು. ಅದನ್ನು ಕೇಳಿ ಸುಂದರ ದತ್ತನೆಂಬ ವ್ಯಾಪಾರಸ್ಥನು ಅವನನ್ನು ಕರೆದು ತನ್ನ ಅಂಗಡಿ ಯಲ್ಲಿ ಲೆಕ್ಕಬರೆಯುವ ಕೆಲಸವನ್ನು ಕೊಟ್ಟನು. ಅಲ್ಲಿ ಮೂರು ತಿಂಗಳು ಕೆಲಸ ಮಾಡುವಷ್ಟರಲ್ಲಿ ಶರೋದಧರನಿಗೆ ಲೆಕ್ಕಬರೆಯುವ ಸೂಕ್ಷ್ಮ ಪದ್ಧತಿ ಗಳೂ, ವ್ಯಾಪಾರದ ಸುಳಿವುಗಳೂ ಗೊತ್ತಾದುವು.

ಆ ಊರಿನಲ್ಲಿ ಅಶೋಕಮಿತ್ರನೆಂಬ ಮತ್ತೊಬ್ಬ ವ್ಯಾಪಾರಿ ಇದ್ದನು. ಅವನಿಗೂ ಸುಂದರದತ್ತನಿಗೂ ವ್ಯಾಪಾರದ ರಂಗದಲ್ಲಿ ಬಲವಾದ ಸ್ಪರ್ಧೆ ಇದ್ದಿತು. ಶರೋದಧರನು ಒಳ್ಳೆಯ ಚುರುಕು ಕೆಲಸದವನೆಂದೂ, ನಂಬುಗಸ್ಥನೆಂದೂ ತಿಳಿದು ಅಶೋಕಮಿತ್ರನು, ಅವನ ಬಳಿಗೆ ತನ್ನ ಮನುಷ್ಯರನ್ನು ಕಳುಹಿಸಿ, ಸುಂದರ ದತ್ತನು ಕೊಡುವುದಕ್ಕಿಂತ ನೂರುವರಹ ತಾನು ಹೆಚ್ಚಿಗೆ ಕೊಡುವೆನೆಂದು ತಿಳಿಸಿದನು.

ಆಮೇಲೆ ಒಂದು ವಾರದೊಳಗೆ ಶರೋದಧರನು ಸುಂದರದತ್ತನ ಕೆಲಸಬಿಟ್ಟು, ಅಶೋಕಮಿತ್ರನ ಹತ್ತಿರ ಸೇರಿಕೊಂಡನು.

ಆ ಊರಿನ ಜಮೀನುದಾರ ಕೃಷ್ಣರಾಜಾ ಅವರಿಗೆ ತಮ್ಮ ದಿವಾಣದ ಲೆಕ್ಕ ಪತ್ರ ಬರೆಯುವ ಕುಲಕರ್ಣಿಗೆ ಒಬ್ಬ ಸಹಾಯಕನು ಬೇಕಾಗಿ ಬಂತು. ಅವರು ಶರೋದಧರನನ್ನು ಕರೆಯಿಸಿ, ಅಶೋಕಮಿತ್ರನು ಕೊಡುವ ಸಂಬಳ ಎಷ್ಟೆಂದು ಕೇಳಿದರು. ಇನ್ನೂರು ವರಹಗಳೆಂದನು ಶರೋದಧರ.

"ಇನ್ನೂರು ವರಹಗಳೇ? ಬಹಳ ಕಡಿಮೆ. ನಾನು ನಾನ್ನೂರು ವರಹ ಸಂಬಳ ಕೊಡುತ್ತೇನೆ. ನಮ್ಮ ದಿವಾಣದಲ್ಲಿ ಸೇರಿಬಿಡು" ಎಂದರು ಜಮೀನುದಾರರು.

ಹಾಗೆಯೇ ಶರೇದಧರನು ದಿವಾಣದಲ್ಲಿ ಕೆಲಸಕ್ಕೆ ಸೇರಿದನು. ಎರಡು ಮೂರು ತಿಂಗಳು ಕಳೆದುವು. ಒಂದು ದಿನ ಅವನ ಚಿಕ್ಕಂದಿನ ಸ್ನೇಹಿತನಾದ ಧರ್ಮ ರಾಜನೆಂಬವನು ಶರೋದಧರನನ್ನು ನೋಡಿ, "ನಾನು ಸರಕುಗಳ ಆಯಾತ, ನಿರ್ಯಾತಗಳಂತಹ ಒಳ್ಳೆಯ ಲಾಭಕಾರಿಯಾದ ವ್ಯಾಪಾರ ಮಾಡುತ್ತಿದ್ದೇನೆ. ನೀನು

ಆರ್. ಎಸ್. ನಾರಾಯಣ

ನನ್ನೊಂದಿಗೆ ಭಾಗಸ್ಥನಾಗಿ ಸೇರಿಬಿಡು. ಒಳ್ಳೆಯ ಆದಾಯ ಬರುತ್ತದೆ" ಎಂದನು.

"ನನಗೆ ಸ್ವಂತ ವ್ಯಾಪಾರವೆಂದರೆ ಇಷ್ಟವಿಲ್ಲ." ಎಂದನು ಭರಣೀಧರ.

"ಹಾಗಾದರೆ ನನ್ನ ವ್ಯಾಪಾರದಲ್ಲಿ ಲೆಕ್ಕಗಳನ್ನು ನೋಡಿಕೊಳ್ಳುವವನಾಗಿ, ನನಗೆ ಮುಖ್ಯ ಸಹಾಯಕನಾಗಿರು. ನಿನಗೆ ಜಮೀನುದಾರರು ಕೊಡುವುದಕ್ಕೆ ಎರಡು ಪಾಲು ಹೆಚ್ಚು ಸಂಬಳ ಕೊಡುತ್ತೇನೆ" ಎಂದನು ಧರ್ಮರಾಜ.

ಭರಣೀಧರನು ದಿವಾಣದ ಉದ್ಯೋಗವನ್ನು ಬಿಟ್ಟು, ಧರ್ಮರಾಜನ ಹತ್ತಿರ ಸೇರಿದನು. ಆದರೆ ಒಂದು ತಿಂಗಳು ಮುಗಿಯುವುದರೊಳಗೇ ಧರ್ಮರಾಜನು ಮಾಡುವುದೆಲ್ಲ ಕಳ್ಳವ್ಯಾಪಾರವೆಂಬ ಗುಟ್ಟು ಹೊರಬಿದ್ದು, ಅಧಿಕಾರಿಗಳು ಅವನನ್ನು ಹಿಡಿದು ಜೈಲಿಗೆ ಕಳುಹಿಸಿಬಿಟ್ಟರು.

ಈಗ ಭರಣೀಧರನಿಗೆ ಕೆಲಸವಿಲ್ಲ. ಯಾರೂ ಅವನನ್ನು ಕರೆಯುವುದೂ ಇಲ್ಲ. ಆದುದರಿಂದ ತಾನೇ ಉದ್ಯೋಗಾನ್ವೇಷಣೆ ಮಾಡಿದನು. ಆದರೆ ಯಾರೂ ಅವನಿಗೆ ಉದ್ಯೋಗ ಕೊಡಲಿಲ್ಲ.

ಅವನು ಉದ್ಯೋಗ ಹುಡುಕುತ್ತ ತಿರುಗಿ ತಿರುಗಿ ಬೇಸತ್ತು, ಪಕ್ಕದ ಊರಿನಲ್ಲಿರುವ ತನ್ನ ಸೋದರ ಮಾವನ ಮನೆಗೆ ಹೋದನು. ಆ ಮಾವನ ಹೆಸರು ಶಿವಸ್ವಾಮಿ. ಅವನೊಬ್ಬ ಚಿಕ್ಕ ಭೂಮಾಲಿಕನಾಗಿದ್ದನು. ಭರಣೀಧರನು ತನ್ನ ಸಮಾಚಾರವನ್ನೆಲ್ಲಾ ಅವನೊಂದಿಗೆ ಹೇಳಿದನು.

ಅದನ್ನೆಲ್ಲ ಕೇಳಿ, "ಅಲ್ಲಪ್ಪಾ, ಯಾರು ನಾಲ್ಕು ಕಾಸು ಹೆಚ್ಚಿಗೆ ಕೊಡುವರೋ ಅವರ ಬಳಿಗೆ ಓಡಿಬಿಡುವಂಥ ನೆಲೆಗೇಡಿಯಾದ ನಿನ್ನಂಥವನಿಗೆ ಯಾರು ಉದ್ಯೋಗ ಕೊಟ್ಟಾರು ?" ಎಂದನು ಶಿವಸ್ವಾಮಿ.

"ಹಾಗಲ್ಲ ಮಾವಯ್ಯಾ. ಇನ್ನು ಮುಂದೆ ನಾನು ಎಂತಹ ಪ್ರಲೋಭನೆಗೂ ಹೋಗಲಾರೆ. ಸ್ಥಿರವಾಗಿ ಉದ್ಯೋಗ ಮಾಡುತ್ತೇನೆಂದು ಪ್ರಮಾಣ ಪತ್ರ ಬರೆದು ಕೊಡುತ್ತೇನೆ" ಎಂದನು ದೀನನ ಹಾಗೆ ಭರಣೀಧರ.

ಮರುದಿನ ಶಿವಸ್ವಾಮಿ ಸೋದರಳಿಯನನ್ನು ಕರೆದುಕೊಂಡು ಕೃಷ್ಣರಾಜ ಜಮೀನುದಾರರ ಬಳಿಗೆ ಹೋಗಿ, ನಡೆದ ಸಂಗತಿಯನ್ನೆಲ್ಲಾ ಹೇಳಿ, "ಇನ್ನು ಮೇಲೆ ಇವನು ನೆಲೆಯಾಗಿ ನಿಂತು ಕೆಲಸ ಮಾಡುತ್ತೇನೆನ್ನುತ್ತಾನೆ. ಬೇಕಾದರೆ ಪ್ರಮಾಣ ಪತ್ರ ಬರೆದು ಕೊಡುತ್ತಾನೆ" ಎಂದನು.

"ಅಂತಹುದೇನೂ ಆಗತ್ಯವಿಲ್ಲ. ನಿಮ್ಮವನ ಬದುಕಿನ ಅಗತ್ಯವೇ ನನಗೆ ಪ್ರಮಾಣ ಪತ್ರ" ಎಂದು ಜಮೀನುದಾರರು ಭರಣೀಧರನಿಗೆ ಮತ್ತೆ ದಿವಾಣದಲ್ಲಿ ಉದ್ಯೋಗ ಕೊಟ್ಟರು.






ಲಕ್ಷ್ಮೀದೇವಿ ವೇದವತಿಯಾಗಿ ಅವತಾರವೆತ್ತಿ ವಿಷ್ಣುವನ್ನೇ ಧ್ಯಾನಿಸಿಕೊಂಡು ತಪಸ್ಸಿನಲ್ಲಿ ಮಗ್ನಳಾಗಿದ್ದಳು. ಅವಳ ಸೌಂದರ್ಯವನ್ನು ನೋಡಿ ರಾವಣನು ಅವಳ ತಲೆಗೂದಲಿಗೆ ಕೈಹಾಕಿ ಎಳೆದನು. ಅವಳು ರಾವಣನನ್ನು ಶಪಿಸಿ ಯೋಗಾಗ್ನಿಯಿಂದ ತನ್ನನ್ನು ತಾನು ದಹಿಸಿಕೊಂಡು ಹೋಗಿ ಲಂಕೆಯಲ್ಲಿಯೇ ಹುಟ್ಟಿದಳು.

ಲಂಕಾಪಟ್ಟಣವನ್ನು ಅನುಸರಿಸಿಕೊಂಡು ಅಂದವಾದ ದೊಡ್ಡದೊಂದು ಸರೋವರವಿದ್ದಿತು. ರಾವಣನು ಪ್ರತಿದಿನ ಪ್ರಾತಃಕಾಲದಲ್ಲಿ ಆ ಸರೋವರದಲ್ಲಿ ಸ್ನಾನ ಸಂಧ್ಯೆಗಳನ್ನು ತೀರಿಸಿ ಶಿವಾರ್ಚನೆ ಮಾಡುವನು. ಹಾಗೆ ಅವನು ಶಿವಾರ್ಚನೆಗಾಗಿ ತಾಮರೆ ಹೂಗಳನ್ನು ಕೀಳುತ್ತಿರುವಾಗ, ದೊಡ್ಡದೊಂದು ತಾಮರೆ ಪುಷ್ಪವು ಸರೋವರದ ಮಧ್ಯದಲ್ಲಿ ಧವಳ ಕಾಂತಿಯಿಂದ ಹೊಳೆಯುವುದನ್ನು ನೋಡಿದನು. ಅವನು ಅದರ ಬಳಿಗೆ ಹೋಗಲು, ಆ ಹೂವಿನಲ್ಲಿ ಬಂಗಾರದ ರಂಗಿನಿಂದ ಮಿರುಗುವ ಹೆಣ್ಣು ಶಿಶುವನ್ನು ನೋಡಿದನು. ಅವನನ್ನು ನೋಡಿ ಶಿಶು ಕ್ಯಾರು ಕ್ಯಾರೆಂದು ಕೂಗಿತು.

ಆ ಹಸು ಮಗುವನ್ನು ನೋಡಿ ರಾವಣನು ಲಜ್ಜೆಗೊಳ್ಳುತ್ತಿರಲು, ಅಶರೀರವಾಣಿಯೊಂದು ಕೇಳಿಸಿತು: "ಹೇ ರಾವಣಾ! ಆ ಮಗು ನಿನಗೂ ನಿನ್ನ ಲಂಕೆಗೂ ಕೆಡುಕುಮಾಡಲು ಹುಟ್ಟಿರುತ್ತದೆ"!

ಇದನ್ನು ಕೇಳಿ ರಾವಣನು ರಾಕ್ಷಸವೀರರನ್ನು ಕರೆದು, ಆ ಮಗುವನ್ನು ಕೊಂದು ಬರುವಂತೆ ಅಪ್ಪಣೆ ಮಾಡಿದನು.

ಅವರು ಏನು ಮಾಡಿದರೂ ಆ ಮಗು ಸಾಯಲಿಲ್ಲ. ಕತ್ತಿಗಳು ಭಟರ ಕೈಯಿಂದ ಮಾಯವಾಗುತ್ತಿದ್ದುವು. ಬೆಂಕಿಗೆ ಹಾಕಿದರೆ ಬೆಂಕಿ ನಂದಿ ಹೋಗುತ್ತಿತ್ತು. ಕಲ್ಲುಬಂಡೆಗಳು ಹೂವಿನ ರಾಶಿಗಳಾಗುತ್ತಿದ್ದುವು. ಕ್ರೂರ ಮೃಗಗಳು ಓಡಿ ಹೋಗುತ್ತಿದ್ದುವು.

ರಾಕ್ಷಸ ಭಟರು ಬೇಸತ್ತು, ಆ ಮಗುವನ್ನು ಪಂಚಲೋಹಗಳಿಂದಾದ ಒಂದು ಪೆಟ್ಟಿಗೆಯೊಳ

೧೧. ಸೀತಾರಾಮ ಕಲ್ಯಾಣ



ಗಿಟ್ಟು, ಸಮುದ್ರದ ಮಧ್ಯದಲ್ಲಿ ಹಾಕಿಬಿಟ್ಟರು. ಆ ಪೆಟ್ಟಿಗೆ ಸಮುದ್ರವನ್ನು ದಾಟಿ ಭೂಮಿಯೊಳಗೆ ಸೇರಿ ಮುಂದೆ ಹೋಯಿತು.

ಮಿಥಿಲಾ ನಗರವನ್ನು ಆಳಿಕೊಂಡಿರುವ ಜನಕ ಮಹಾರಾಜನು ದೊಡ್ಡ ರಾಜರ್ಷಿಯಾಗಿ, ಮಹಾ ಜ್ಞಾನಿಯಾಗಿದ್ದನು. ಅವನು ಯಜ್ಞಕಾರ್ಯಕ್ಕಾಗಿ ನೆಲವನ್ನು ಸಮಮಟ್ಟ ಮಾಡಲು ಉಳುಮೆ ಮಾಡಿಸಿಕೊಂಡಿದ್ದನು. ಆಗ ನೇಗಿಲಿನ ಬಾಯಿಗೆ ಖಣೀಲೆಂದು ಒಂದು ಪೆಟ್ಟಿಗೆ ತಗಲಿತು. ಪೆಟ್ಟಿಗೆಯನ್ನು ಮಣ್ಣಿನೊಳಗಿನಿಂದ ತೆಗೆದು, ತೆರೆದು ಮುದ್ದಿನ ಮೂಟೆಯಾಗಿರುವ ಮಗುವನ್ನು ನೋಡಿ ಜನಕನು ಬಾಚಿ ಎತ್ತಿಕೊಂಡನು. ಅದು ಭೂದೇವಿ ತನಗೆ ಪ್ರಸಾದಿಸಿದ ಮಗಳೆಂದೇ ಭಾವಿಸಿದನು.

ನೇಗಿಲಿನ ಒಳಿಗೆ ಸೀತ ಎನ್ನುವುದರಿಂದ, ಅಂತಹ ನೇಗಿಲಿನ ಸೀಳಿನಲ್ಲಿ ದೊರೆತ ಆ ಮಗುವಿಗೆ "ಸೀತೆ" ಎಂದೇ ಹೆಸರಿಟ್ಟು ಕೊಂಡಾಡಲಾಯಿತು.

ಜನಕನ ಮಗಳಾದುದರಿಂದ "ಜಾನಕಿ" ಎಂದೂ, ಭೂಮಿಯಲ್ಲಿ ಸಿಕ್ಕಿದವಳಾದುದರಿಂದ "ಭೂಜಾತೆ" ಎಂದೂ ಕರೆಯಲ್ಪಡುತ್ತ, ಎಲ್ಲರ ಮುದ್ದು ಮುಚ್ಚಟೆಗಳಿಗೂ ಪಾತ್ರಳಾಗಿ ಸೀತೆ ಬೆಳೆಯುತ್ತಿದ್ದಳು.

ಸೀತೆ ಈಡುಜೋಡಿಗಳಾದ ಗೆಳತಿಯರೊಂದಿಗೆ ಚೆಂಡಾಟವಾಡುತ್ತಾ, ಒಮ್ಮೆ ಕಾಣದೆಹೋದ ಚೆಂಡನ್ನು ಹುಡುಕಿಕೊಂಡು ಅತ್ತಿತ್ತ ಹೋದಳು. ಒಂದು ಕಡೆಯಲ್ಲಿ ಹೂವುಗಳಿಂದ ಪೂಜಿಸಲ್ಪಡುವ ದೊಡ್ಡದೊಂದು ಧನುಸ್ಸಿನ ಎಡೆಯಲ್ಲಿ ಆ ಚೆಂಡು ನೋಡಿದಳು. ಓಡಿಬಂದು ಎಡಗೈಯಿಂದ ಆ ಧನುಸ್ಸನ್ನು ಎತ್ತಿ ಆಚೆಗಿಟ್ಟು, ಚೆಂಡನ್ನೆತ್ತಿಕೊಂಡಳು. ಆಟಕ್ಕೆ ಆ ಧನುಸ್ಸು ಚೆನ್ನಾಗಿದೆ ಎಂದುಕೊಂಡು ಅದನ್ನು ಅವಲೀಲೆಯಾಗಿ ತಂದು ನಿಲ್ಲಿಸಿ ಚೆಂಡಿನೇಟಿಗೆ ಗುರಿಪಡಿಸಿಟ್ಟು ಆಟ ಸಾಗಿಸಿದಳು.

ಇದನ್ನು ಕಣ್ಣಾರೆ ನೋಡಿದ ಜನಕನು ನಿರ್ವಿಣ್ಣನಾಗಿ ಹೋದನು.

ಆ ಧನುಸ್ಸು ಜನಕನ ಪೂರ್ವಿಕರು ಶಿವನಿಂದ ವರಪ್ರಸಾದವಾಗಿ ಸಂಪಾದಿಸಿ ಪೂಜಿಸಿಕೊಂಡು ಬಂದಿದ್ದರು. ತ್ರಿಪುರಾಸುರ ಸಂಹಾರದಲ್ಲಿ ಶಿವನು ಆ ಬಿಲ್ಲು ಹಿಡಿದುಕೊಂಡೇ ಯುದ್ಧ ಮಾಡಿದ್ದನು. ಆ ಶಿವಧನುಸ್ಸನ್ನು ಎತ್ತಬೇಕಾದರೆ ಬಲಾಢ್ಯರಾದ ಮುನ್ನೂರು ಮಂದಿಗಳು ಇರಬೇಕಾಗಿತ್ತು.

ಅಂತಹ ಬಿಲ್ಲನ್ನು ಲೀಲಾಜಾಲವಾಗಿ ಎತ್ತಿದ ಸೀತೆ ಸಾಮಾನ್ಯದವಳಲ್ಲವೆಂದೂ, ಆ ಶಿವಧನುಸ್ಸನ್ನು ಎತ್ತಿ ನಾಣೇರಿಸಬಲ್ಲವನಿಗೆ ಮಾತ್ರವೇ ಸೀತೆಯನ್ನು ಮದುವೆಯಾಗುವ ಅರ್ಹತೆ ಇದೆಯೆಂದೂ ಜನಕನಿಗೆ ತೋರಿತು.

ಸೀತೆಗೆ ಸ್ವಯಂವರವನ್ನು ಏರ್ಪಡಿಸಿ, ಶಿವ ಧನುಸ್ಸನ್ನು ಎತ್ತಿ ಬಾಗಿಸಬಲ್ಲವನನ್ನು ಅವಳು ವರಿಸುವಳೆಂದು ಪಂಥವಿಡಿಸಲು ಜನಕನು ಆಗಲೇ ನಿಶ್ಚಯಿಸಿದನು.



ಹೀಗೆ ಸೀತೆ ಅದೊಂದನ್ನೂ ಅರಿಯದೆ ಮಿಥಿಲಾ ನಗರದಲ್ಲಿ ಬೆಳೆದು ದೊಡ್ಡವಳಾದಳು.

ವಿಶ್ವಾಮಿತ್ರನು ಯಾಗರಕ್ಷಣೆಗೆ ರಾಮಲಕ್ಷ್ಮಣರನ್ನು ತನ್ನೊಂದಿಗೆ ಕಳುಹಿಸಬೇಕೆಂದು ಜನಕನನ್ನು ಕೇಳಿದನು. ಅದಕ್ಕೆ ದಶರಥನು, "ರಾಕ್ಷಸರಿಂದ ಯಾಗರಕ್ಷಣೆ ಮಾಡಲು ಈ ಹಸುಬಾಲರಿಂದ ಹೇಗಾದೀತು? ಓ ಮಹರ್ಷೀ! ಅವರು ಅಸ್ತ್ರ ವಿದ್ಯೆಗಳನ್ನು ಇನ್ನು ಮೇಲಷ್ಟೇ ಕಲಿಯಬೇಕಾಗಿದೆ" ಎಂದನು. "ಅದು ನಿಜ. ಅದಕ್ಕಾಗಿ ತಾನೇ ನಾನು ಬಂದಿದ್ದೇನೆ? ಕ್ಷತ್ರಿಯ ರಾಜಪುತ್ರರಿಗೆ ಯಾವ ಯಾವ ವಿದ್ಯೆಗಳು ಬೇಕೋ ಅವನ್ನೆಲ್ಲಾ ನಾನು ಕಲಿಸಿಕೊಡುತ್ತೇನೆ." ಎಂದು ವಿಶ್ವಾಮಿತ್ರನು ಹೆಚ್ಚಳಿಕೆಯಿಂದ ವಸಿಷ್ಠನನ್ನು ನೋಡಿದನು.

ವಶಿಷ್ಠನು ಮುಗುಳುನಗುತ್ತಾ ವಿಶ್ವಾಮಿತ್ರನನ್ನು ಮೆಚ್ಚಿಕೊಂಡು, ರಾಮಲಕ್ಷ್ಮಣರನ್ನು ಆತನೊಂದಿಗೆ ಕಳುಹಿಸುವುದು ಬಹಳ ಒಳ್ಳೆಯದೆಂದು ದಶರಥನೊಂದಿಗೆ ಹೇಳಿದನು. ರಾಮಲಕ್ಷ್ಮಣರು ಮುನಿಗಳ ಹಾಗೆಯೇ ತಲೆಮುಡಿಯನ್ನು ಕಟ್ಟಿಕೊಂಡು, ಧನುರ್ಬಾಣಗಳನ್ನು ಧರಿಸಿ ವಿಶ್ವಾಮಿತ್ರನೊಂದಿಗೆ ಹೊರಟರು.

ದಾರಿಯುದ್ದಕ್ಕೂ ವಿಶ್ವಾಮಿತ್ರನು ಅವರಿಗೆ ಧನುರ್ವಿದ್ಯೆಯ ವಿಶೇಷ ಸೂಕ್ಷ್ಮಗಳನ್ನು ಬೋಧಿಸುತ್ತ ಸಿದ್ಧಾಶ್ರಮಕ್ಕೆ ಕರೆದುಕೊಂಡು ಹೋದನು.

ಪ್ರತಿಭಾಶಾಲಿಗಳಾದ ರಾಮಲಕ್ಷ್ಮಣರು ವಿಶ್ವಾಮಿತ್ರನ ಸುನಿಶಿತ ಶಿಕ್ಷಣದಲ್ಲಿ ಧನುರ್ವಿದ್ಯೆಯಲ್ಲಿ ಇನ್ನೇನೂ ಕಲಿಯಲಿಕ್ಕಿಲ್ಲದಂತೆ ಪಾರಂಗತರಾದರು. ವಿಶ್ವಾಮಿತ್ರನು ಋಷಿಗಳೊಂದಿಗೆ ಕೂಡಿ ಯಾಗವನ್ನು ಪ್ರಾರಂಭಿಸಲು ಬೇಕಾದ ಏರ್ಪಾಡುಗಳನ್ನು ಮಾಡಿಕೊಂಡಿದ್ದನು. ಆ ಸಮಯದಲ್ಲಿ ಭಯಂಕರವಾಗಿ ಆರ್ಭಟಿಸುತ್ತ ರಾಕ್ಷಸಿ ತಾಟಕಿ ಸಿಡಿಲಿನ ಹಾಗೆ ಆಶ್ರಮದ ಮೇಲೆ ಬಿದ್ದಳು.

ವಿಶ್ವಾಮಿತ್ರನು ಯಾವ ಸಂದೇಹಕ್ಕೂ ಎಡೆಗೊಡದೆ ತಾಟಕಿಯನ್ನು ಕೊಲ್ಲುವಂತೆ ರಾಮನಿಗೆ ಅಪ್ಪಣೆ ಮಾಡಿದನು. ರಾಮನು ತಾಟಕಿಯ ಮೇಲೆ ಶರಪರಂಪರೆಗಳನ್ನು ಸುರಿಸಿದನು. ಅವಳ ಸರ್ವಾಂಗವನ್ನೂ ಬಾಣಗಳು ಚುಚ್ಚಿಕೊಂಡುವು. ಆದರಿಂದ ಅವಳು ದೊಡ್ಡ ಪರ್ವತದ ಹಾಗೆ ನೆಲದಲ್ಲಿ ಬಿದ್ದು ಪ್ರಾಣಬಿಟ್ಟಳು.

ರಾಮನ ಬಾಣ ಪ್ರಯೋಗದ ಕೌಶಲವನ್ನು ನೋಡಿ ವಿಶ್ವಾಮಿತ್ರನು ಬಹಳವಾಗಿ ಮೆಚ್ಚಿಕೊಂಡನು. ತಾನು ಅವರಿಗೆ ಕಲಿಸಿದ ವಿದ್ಯೆ ಸಾರ್ಥಕವಾದಂತೆ ಅವನಿಗೆ ತೋರಿತು.

ಯಾಗವು ಪ್ರಾರಂಭವಾಯಿತು. ವಿಶ್ವಾಮಿತ್ರನು ರಾಮನಿಗೆ ವಿಶೇಷವಾದ ಕೆಲವು ಅಸ್ತ್ರಗಳನ್ನು ಉಪದೇಶಿಸಿದನು. ರಾಮನೂ ಲಕ್ಷ್ಮಣನೂ ಧನುರ್ಧಾರಿಗಳಾಗಿ ಆಶ್ರಮದ ಸುತ್ತಲೂ ತಿರುಗುತ್ತ ರಕ್ಷಣೆ ಮಾಡಿಕೊಂಡಿದ್ದರು.




ಹಾಗಿರುವಾಗ ಯಾಗ ನಾಶನವನ್ನೇ ಧ್ಯೇಯ ವಾಗಿಟ್ಟುಕೊಂಡ ಮಾರೀಚನೂ, ಸುಬಾಹುವೂ ಒಟ್ಟಿಗೇ ಆಶ್ರಮದ ಮೇಲೆ ಬಿದ್ದರು. ಮರುಕ್ಷಣ ದಲ್ಲಿ ರಾಮನು ಎರಡೇ ಬಾಣಗಳನ್ನು ಪ್ರಯೋಗಿ ಸಿದನು. ಸುಬಾಹು ಸತ್ತುಬಿದ್ದನು. ಮಾರೀಚನು ಬಾಣದ ಪೆಟ್ಟಿನ ವೇಗಕ್ಕೆ ಕೊನೆಯುಸಿರಿನೊಂದಿಗೆ ಸಮುದ್ರಕ್ಕೆ ಹೋಗಿ ಬಿದ್ದು, ಹೇಗೋ ಬದುಕಿ ಲಂಕೆಯನ್ನು ಸೇರಿದನು.

ಆಮೇಲೆ ಯಾಗವು ನಿರ್ವಿಘ್ನವಾಗಿ ಸಾಗಿತು. ಯಾಗ ಸಮಾಪ್ತಿಯ ಕಾಲದಲ್ಲಿ ವಿಶ್ವಾಮಿತ್ರನು ರಾಮನ ಕೈಯಿಂದ ಹವಿಸ್ಸುಗಳನ್ನು ಹಾಕಿಸಿ ಹೋಮ ಮಾಡಿಸಿದನು. ಆಗ ಯಜ್ಞಕುಂಡದಿಂದ ಹೊರಟ ಜ್ವಾಲೆಗಳಲ್ಲಿ ತೇಲುತ್ತ, ಅರ್ಧಚಂದ್ರಾಕಾರದ ಒಂದು ದಿವ್ಯ ಬಾಣವು ಕಾಂತಿಯುತವಾಗಿ ಮೇಲೆದ್ದು ಬಂತು.

ವಿಶ್ವಾಮಿತ್ರನು, "ರಾಮಾ, ಅದು ನಿನ್ನ ಬಾಣ. ರಾಮಬಾಣವೆಂದು ಅದು ಹೆಸರು ಪಡೆಯುತ್ತದೆ. ಈ ಬಾಣಕ್ಕೆ ಯಾವ ಪ್ರತ್ಯಸ್ತ್ರವೂ ಪ್ರಪಂಚ ದಲ್ಲಿಲ್ಲ. ಶತ್ರುವಿನ ಕಂಠವನ್ನು ತರಿದು ಮತ್ತೆ ನಿನ್ನ ಹತ್ತಿರವೇ ಬಂದು ಸೇರುವ ಬಾಣವಿದು" ಎಂದು ಹೇಳಿ ಆ ಬಾಣವನ್ನು ರಾಮನಿಗೆ ಕೊಟ್ಟನು.

ವಿಶ್ವಾಮಿತ್ರನು ಬೇರೆ ಕೆಲವು ಯಾಗಗಳನ್ನೂ ಮಾಡಿದನು. ಆ ಕಾಲದಲ್ಲಿ ವಿಶ್ವಾಮಿತ್ರನು ಇನ್ನೂ ಕೆಲವು ಮಹಾಮಹಾ ಅಸ್ತ್ರಗಳನ್ನು ರಾಮನಿಗೆ ಉಪದೇಶಮಾಡಿದನು. ಹೊಸಹೊಸ ಬಾಣಗಳನ್ನೂ ಕೊಟ್ಟನು. ಅವನು ಕೊಟ್ಟ ಪ್ರತಿಯೊಂದು ಬಾಣ ವನ್ನೂ ಕಣ್ಣಿಗೊತ್ತಿಕೊಂಡು ಸ್ವೀಕರಿಸಿ ಪ್ರಣಾಮ ಮಾಡಿದನು ರಾಮ.

"ರಾಮಾ, ನಾನೂ ನೀನೂ ಸೂರ್ಯವಂಶ ದವರು. ನನಗೆ ತಿಳಿದ ಅಸ್ತ್ರವಿದ್ಯೆಗಳೆಲ್ಲವನ್ನೂ ನಿನಗೆ ಉಪದೇಶಿಸಿದುದಕ್ಕೆ ನನಗೆ ಬಹಳ ಸಂತೋಷ ವಾಗುತ್ತದೆ. ನಿನ್ನಂತಹ ಸತ್ಪಾತ್ರನಿಗೆ ಗುರುವೆನಿಸಿ ಕೊಂಡು ನಾನು ಹರ್ಷಪುಲಕಿತನಾಗುತ್ತೇನಪ್ಪಾ" ಎಂದನು ವಿಶ್ವಾಮಿತ್ರ.

"ಗುರುದೇವಾ, ನಿಮ್ಮ ಕೃಪೆಗೆ ಪಾತ್ರನಾದ ನಾನು ಧನ್ಯನಾದೆನು" ಎಂದನು ರಾಮ.

ವಿಶ್ವಾಮಿತ್ರನ ಸಿದ್ಧಾಶ್ರಮದಲ್ಲಿಯೇ ರಾಮ ಲಕ್ಷ್ಮಣರು ಯೌವನವಂತರಾದರು.

ಒಂದುದಿನ ಅಸ್ತ್ರಶಸ್ತ್ರಗಳ ಪ್ರಯೋಗ ಉಪ ಸಂಹಾರಗಳಲ್ಲಿರುವ ವಿಶೇಷಗಳನ್ನು ಹೇಳುತ್ತಾ ವಿಶ್ವಾಮಿತ್ರನು, ರಾಮನನ್ನು ವಾತ್ಸಲ್ಯದಿಂದ ನೋಡುತ್ತ, "ರಾಮಾ, ನಿನ್ನ ವಿಶಾಲ ನಯನಾರ ವಿಂದಗಳು ಶಾಂತಿಚಂದ್ರಿಕೆಯನ್ನು ಪಸರಿಸುತ್ತ, ನನ್ನ ಆಶ್ರಮವನ್ನು ಶಾಂತಿನಿಲಯವಾಗಿ ಮಾಡಿದು ದರಿಂದ ನೀನು ಶಾಂತರಾಮನು, ಸುಂದರರಾಮನು!" ಎಂದು ಬೆನ್ನುತಟ್ಟಿ, ಶ್ಲಾಘಿಸಿ ತನ್ನೊಂದಿಗೆ ಬರುವಂತೆ ಹೇಳಿ, ಆಶ್ರಮದಿಂದ ಹೊರಟನು.



ರಾಮಲಕ್ಷ್ಮಣರು ವಿಶ್ವಾಮಿತ್ರನನ್ನು ಅನುಸರಿಸಿ ಹೋಗುತ್ತಿದ್ದರು. ವಿಶ್ವಾಮಿತ್ರನು ಮಿಥಿಲಾ ನಗರದ ದಾರಿಯನ್ನು ಹಿಡಿದಿದ್ದನು.

ದಾರಿಯಲ್ಲಿ ಗೌತಮಾಶ್ರಮದ ಮೇಲಿಂದಾಗಿ ಹೋಗುತ್ತಿರುವಾಗ, ರಾಮನ ಪಾದವು ತಾಗಿ, ಬಂಡೆಯ ಕಲ್ಲೊಂದು ಸ್ತ್ರೀಮೂರ್ತಿಯಾಗಿ ಎದ್ದಿತು. ಅವಳೇ ಅಹಲ್ಯೆ. ರಾಮನ ಪಾದಸ್ಪರ್ಶದಿಂದ ಅವಳ ಶಾಪವಿಮೋಚನೆಯಾಗಿ ರಾಮನಿಗೆ ನಮಸ್ಕಾರ ಮಾಡಿದಳು. ರಾಮನು ಆಶ್ಚರ್ಯದಿಂದ ಹಿಂಜರಿದನು.

ಅದನ್ನು ನೋಡಿ, ಸಮೀಪದಲ್ಲೇ ಚಿರಕಾಲದಿಂದ ತಪಸ್ಸು ಮಾಡಿಕೊಂಡಿದ್ದ ಗೌತಮನು ತಪಸ್ಸನ್ನು ಸಾಕುಮಾಡಿ ಎದ್ದು ಬಂದನು.

ಅವನು ರಾಮನನ್ನು ಭಕ್ತಿಯ ಕಣ್ಣುಗಳಿಂದ ನೋಡುತ್ತಾ, "ರಾಮಚಂದ್ರಾ, ನನ್ನ ಪತ್ನಿಯ ಶಾಪವು ತೀರಿತು. ಅವಳನ್ನು ಪಾವನಗೊಳಿಸಿ ನೀನು ಪಾವನ ರಾಮನಾದೆ" ಎಂದನು.

ಗಡುವು ಮುಗಿದು ಅಹಲ್ಯೆಯ ಶಾಪವಿಮೋಚನೆಯಾಗಿರಬಹುದು. ತನ್ನಲ್ಲೇನಿದೆ? ಎಂಬ ಹಾಗೆ ರಾಮನು ಗೌತಮನನ್ನು ನೋಡಿದನು.

ಗೌತಮನು ತದೇಕದೃಷ್ಟಿಯಿಂದ ರಾಮನನ್ನು ನೋಡುತ್ತ, "ಹೌದು, ರಾಮಾ! ನೀನು ಬೂದಿ ಮುಚ್ಚಿದ ಕೆಂಡ. ಮಾಯಾಮಾನುಷ ವಿಗ್ರಹನು" ಎಂದನು.

ಹೌದು ಹೌದೆಂಬಂತೆ ವಿಶ್ವಾಮಿತ್ರನು ತಲೆಯನ್ನು ಅಲುಗಿಸಿದನು.

"ವಿಷ್ಣುವಿನ ಅವತಾರಗಳಲ್ಲಿ ರಾಮಾವತಾರದ ಅನಂತರ ಕೃಷ್ಣಾವತಾರದಲ್ಲಿ, ಕೃಷ್ಣನು ತಾನು ಅವತಾರಮೂರ್ತಿ ಎಂಬುದನ್ನು ತಿಳಿಸುವಂತೆ ಅನೇಕ ಲೀಲೆಗಳನ್ನು ತೋರಿಸಿ ಮಾಯಾಮಾನುಷ ವಿಗ್ರಹನೆನಿಸಿಕೊಂಡನು. ರಾಮನು ಪರಿಪೂರ್ಣ ಮಾನವನು ಹೇಗಿರಬೇಕೆಂಬುದನ್ನು ತೋರಿಸಿ ಕರ್ತವ್ಯಪಾಲನೆ ಮಾಡುತ್ತಾನೆ. ಮನುಷ್ಯನು ಹೇಗೆ ನಡೆಯಬೇಕೋ ಹಾಗೆ ನಡೆದು ತೋರಿಸುತ್ತಾನೆ. ಇದೇ ರಾಮಾವತಾರದ ವಿಶೇಷ" ಎಂದು ಸೂತ ಪುರಾಣಿಕನು ವಿವರಿಸಿ ರಾಮಕಥೆಯನ್ನು ಸಾಗಿಸಿ ಕೊಂಡು ಹೋದನು.

ಗೌತಮನು ಎಲ್ಲರನ್ನೂ ಆಶ್ರಮದೊಳಗೆ ಕರೆದು ಕೊಂಡುಹೋಗಿ ಅತಿಥಿಸತ್ಕಾರಗಳನ್ನು ಮಾಡಿದನು. ಅನಂತರ ವಿಶ್ವಾಮಿತ್ರನು ರಾಮಲಕ್ಷ್ಮಣರನ್ನು ಕರೆದುಕೊಂಡು ಮುಂದೆ ಹೊರಟನು.

ದೂರದಲ್ಲಿ ಏನೋ ಕೋಲಾಹಲವು ಕೇಳಿಸ ತೊಡಗಿತು.

ಜನಕಮಹಾರಾಜನು ಸೀತಾಸ್ವಯಂವರ ಮಹೋತ್ಸವಕ್ಕೆ ಮಹರ್ಷಿಗಳೆಲ್ಲರಿಗೂ ಭಕ್ತಿ ಪೂರ್ವಕವಾದ ಆದರದ ಆಹ್ವಾನವನ್ನು ಶತಾನಂದ ನೆಂಬ ಪುರೋಹಿತನ ಮೂಲಕ ಕಳುಹಿಸಿದ್ದನು. ಶತಾ



ನಂದನು ಅಹಲ್ಯಾ ಗೌತಮರ ಕುಮಾರನು. ಶತಾನಂದನ ಪಲ್ಲಕಿಯ ಹಿಂದೆ, ಮಿಥಿಲಾರಾಜ್ಯದ ರಾಜಲಾಂಛನಗಳೊಂದಿಗೆ ಪರಿವಾರವೂ ಬರು ತ್ತಿದ್ದಿತು. ಶತಾನಂದನು ವಿಶ್ವಾಮಿತ್ರನನ್ನು ದರ್ಶಿಸಲು ಸಿದ್ಧಾಶ್ರಮಕ್ಕೇ ಹೊರಟಿದ್ದನು.

ದಾರಿಯಲ್ಲಿ ಇದಿರಾದ ವಿಶ್ವಾಮಿತ್ರನನ್ನು ನೋಡಿ ಶತಾನಂದನು ಪಲ್ಲಕಿಯಿಂದಿಳಿದು ಆವನಿಗೆ ಪ್ರಣಾಮ ಮಾಡಿ ಜನಕನ ಆಹ್ವಾನವನ್ನು ಕೊಟ್ಟನು.

ವಿಶ್ವಾಮಿತ್ರನಿಂದ ತನ್ನ ತಾಯಿ ಅಹಲ್ಯೆಯ ಶಾಪವಿಮೋಚನೆಯಾಯಿತೆಂದು ತಿಳಿದು, ಶತಾ ನಂದನು ಅತ್ಯಾನಂದದಿಂದ, ರಾಮನನ್ನು ಕೀರ್ತಿಸಿ, ತಂದೆತಾಯಿಯರ ಬಳಿಗೆ ಹೋದನು.

ಮುಂದೆ ವಿಶ್ವಾಮಿತ್ರನು ರಾಮಲಕ್ಷ್ಮಣ ರೊಂದಿಗೆ ಮಿಥಿಲೆಯನ್ನು ತಲಪಿದನು.

ಸೀತೆ ಉದ್ಯಾನದಲ್ಲಿ ವಿಹರಿಸಿಕೊಂಡಿದ್ದಳು. ಆವಳೊಂದಿಗೆ ಅವಳ ತಂಗಿ ಊರ್ಮಿಳೆಯೂ ಇದ್ದಳು. ಆ ಉದ್ಯಾನವನದೊಳಗಿನ ಮಾರ್ಗ ದಿಂದಾಗಿಯೇ ವಿಶ್ವಾಮಿತ್ರನು ರಾಮಲಕ್ಷ್ಮಣ ರೊಂದಿಗೆ ನಡೆಯುತ್ತಿದ್ದನು.

ಆಗ ಸೀತೆಯೂ ರಾಮನೂ ಒಬ್ಬರನ್ನೊಬ್ಬರು ನೋಡಿಕೊಂಡರು. ರಾಮನನ್ನು ನೋಡಿದ ಕೂಡಲೇ ಸೀತೆಯ ಮನಸ್ಸಿಗೆ ತನ್ನವನು ಬಂದನು ಎನಿಸಿತು. ಮತ್ತೆ ಅವಳು ಅಲ್ಲಿ ನಿಲ್ಲಲಾಗದೆ ಅಡಿಗಳು ತಡಬಡಿಸುತ್ತಿರಲು ಅಂತಃಪುರ ಮಂದಿರ ದೊಳಗೆ ಓಡಿ ಮರೆಯಾದಳು. ಊರ್ಮಿಳೆ ಲಕ್ಷ್ಮಣನಲ್ಲಿ ಮನಸ್ಸು ಸಿಕ್ಕಿಕೊಂಡವಳಾಗಿ ಸೀತೆಯ ಹಿಂದೆಯೇ ಹೋದಳು.

ಸ್ವಯಂವರಕ್ಕೆ ಜನಕನಿಟ್ಟ ಪಂಥವು ಪ್ರಾರಂಭ ವಾಯಿತು. ಎಂತೆಂತಹ ರಾಜಾಧಿರಾಜರಿಂದಲೂ, ಸಂಪನ್ನರಾದವರಿಂದಲೂ ಶಿವಧನುಸ್ಸನ್ನು ಅಲುಗಿಸಲು ಕೂಡ ಸಾಧ್ಯವಾಗಲಿಲ್ಲ.

ಜನಕರಾಜನು ನಿರಾಶೆಪಡುತ್ತಿರುವಾಗ, ತಂದೆಯ ಹತ್ತಿರವಿದ್ದ ಸೀತೆ, ದೂರದಲ್ಲಿರುವ ರಾಮನನ್ನು ತೋರಿಸುತ್ತ, ಉತ್ಸಾಹದಿಂದ, ಆತನನ್ನು ನೋಡಪ್ಪಾ ಎಂಬಂತೆ ನೋಡಿದಳು.

ವಿಶ್ವಾಮಿತ್ರನು ರಾಮನನ್ನು ಮುಂದಕ್ಕೆ ಕಳುಹಿಸಿ ಸಿದನು. ಆಚಾರ್ಯದೇವನ ಆದೇಶವನ್ನು ಶಿರಸಾ ವಹಿಸಿ. ರಾಮನು ತಾನು ಕೇವಲ ನಿಮಿತ್ತಮಾತ್ರ ನೆಂಬ ಹಾಗೆ ಹೋಗಿ ಶಿವಧನುಸ್ಸಿಗೆ ನಮಸ್ಕರಿ ಸಿದನು. ಬಳಿಕ ಆನೆಮರಿ ಕಬ್ಬಿನ ಜಲ್ಲೆಯನ್ನು ಎಳೆದಂತೆ ಶಿವಧನುಸ್ಸನ್ನು ಅವಲೀಲೆಯಾಗಿ ಎತ್ತಿಹಿಡಿದು, ನೇಣನ್ನು ಬಲವಾಗಿ ಎಳೆಯುತ್ತಿರಲು ಭೂಮ್ಯಾಕಾಶಗಳು ನಡುಗುವಂತೆ ದೊಡ್ಡ ಶಬ್ದ ದೊಂದಿಗೆ ಶಿವಧನುಸ್ಸು ಮುರಿದುಹೋಯಿತು.

ಆ ಮಹಾಧ್ವನಿಯ ತರಂಗಗಳು ದಿಗಂತಗಳಲ್ಲಿ ವ್ಯಾಪಿಸಿಕೊಂಡು ಹೋಗಿ, ದಕ್ಷಿಣ ಮಹಾ ಸಮುದ್ರದ ಮಹೇಂದ್ರ ಪರ್ವತದ ಮೇಲೆ ತಪಸ್ಸಿ

ನಲ್ಲಿರುವ ಪರಶುರಾಮನ ಕಿವಿಗಳನ್ನು ಹೊಕ್ಕುವು. ಕೂಡಲೇ ಪರಶುರಾಮನು ತಪಸ್ಸಿನಿಂದ ಎಚ್ಚೆತ್ತನು. ವಿಷ್ಣುವಿನ ಮತ್ತೊಂದು ರೂಪವಾದ ಗೋಲೋಕವಾಸಿ ಕೃಷ್ಣನು ಹೇಳಿದ ಮಾತುಗಳು ಅವನ ನೆನಪಿಗೆ ಬಂದುವು. ಕೃಷ್ಣನು ತನಗೆ ಕೊಟ್ಟ ಕೋದಂಡವನ್ನು ವಿಷ್ಣುವಿನ ಅಂಶನಾದ ರಾಮನಿಗೆ ಒಪ್ಪಿಸಬೇಕೆಂದು ಪರಶುರಾಮನು ಅಲ್ಲಿಂದ ಹೊರಟನು.

ಸೀತೆ ರಾಮನ ಕೊರಳಿನಲ್ಲಿ ವರಮಾಲೆ ಹಾಕಿ, ಹಿಂದಿರುಗಿ ತಂದೆಯ ಪಕ್ಕದಲ್ಲಿ ಹೋಗಿ ನಿಂತಳು. ಆಮೇಲೆ ಸೀತಾರಾಮರ ಕಲ್ಯಾಣದ ಏರ್ಪಾಡು ಭರದಿಂದ ನಡೆಯಿತು. ದಶರಥನು ಸಕುಟುಂಬ ಸಪರಿವಾರನಾಗಿ ಮಿಥಿಲೆಗೆ ಸಾಗಿಬಂದನು.

ಮದುಮಕ್ಕಳಾದ ಸೀತಾರಾಮರು ಹಸೆ ಮಣೆಯ ಮೇಲೆ ಕುಳಿತು 'ಅರಸಿನೆಣ್ಣೆ' ವಿಧಿ ನೆರವೇರಿಸುವಾಗ, ಸೀತೆಯ ಕಮಲದಂತಹ ಅಂಜಲಿಯಲ್ಲಿ ಮುತ್ತುಗಳು ಪದ್ಮರಾಗಗಳಂತೆ ಪ್ರಕಾಶಿಸುತ್ತ ರಾಮನ ತಲೆಯ ಮೇಲೆ ಜಾಜಿಮಲ್ಲಿಗೆಯ ಮಳೆಯಂತೆ ಬಿದ್ದುವು. ಅವು ರಾಮನ ಶರೀರದಿಂದ ಜಾರುವಾಗ ಇಂದ್ರನೀಲಗಳಂತೆ ಕಾಣುತ್ತಿದ್ದುವು.

ಸೀತೆಯ ತಂಗಿಯಾದ ಊರ್ಮಿಳೆಯನ್ನು ಲಕ್ಷ್ಮಣನಿಗೆ ಕೊಟ್ಟು, ಮಾಂಡವಿಯನ್ನು ಭರತನಿಗೂ, ಶತರೂಪೆಯನ್ನು ಶತ್ರುಘ್ನನಿಗೂ ಕೊಟ್ಟು ಸೀತಾರಾಮ ಕಲ್ಯಾಣ ಮಹೋತ್ಸವದೊಟ್ಟಿಗೇ ಮದುವೆಗಳು ನಡೆದುವು.

ದಶರಥನು ಕುಮಾರರೊಂದಿಗೂ, ಸೊಸೆಯಂದಿರೊಂದಿಗೂ ಅಯೋಧ್ಯೆಗೆ ಹಿಂದಿರುಗಿ ಪ್ರಯಾಣ ಹೊರಟನು. ದಾರಿಯಲ್ಲಿ ಬೇಗಬೇಗನೆ ಈ ಕಡೆಗೇ ಬರುತ್ತಿರುವ ಪರಶುರಾಮನನ್ನು ನೋಡುತ್ತಲೇ, ದಶರಥನು ರಥದಿಂದ ಇಳಿದು ಕ್ಷತ್ರಿಯಾಂತಕನಾದ ಪರಶುರಾಮನಿಗೆ ನಮಸ್ಕಾರಮಾಡಿ, ರಾಮನ ತಲೆಗೆ ಬದಲಾಗಿ ತನ್ನ ತಲೆಯನ್ನು ಕಡಿಯುವಂತೆ ಬೇಡಿಕೊಂಡನು.

"ಆ ಕಾರ್ಯವನ್ನು ನಾನು ಯಾವಾಗಲೋ ಬಿಟ್ಟಿದ್ದೇನೆ" ಎಂದು ಪರಶುರಾಮನು ರಾಮನನ್ನು ನೋಡಿ, "ಓ ರಾಮಾ! ನೀನು ಆ ಹರನ ಬಿಲ್ಲನ್ನು ಮುರಿದೆಯಂತೆ. ಈ ಬಿಲ್ಲಿಗೆ ನಾಣೇರಿಸು ನೋಡುತ್ತೇನೆ" ಎಂದು ತನ್ನ ಕೈಯಲ್ಲಿದ್ದ ಕೋದಂಡವನ್ನು ರಾಮನಿಗೆ ಕೊಟ್ಟನು.

ಅದನ್ನು ಪಡೆದುಕೊಳ್ಳುತ್ತಿರುವಾಗಲೇ, ಪರಶುರಾಮನಲ್ಲಿದ್ದ ವಿಷ್ಣುವಿನ ಅಂಶವು ರಾಮನನ್ನು ಸೇರಿಕೊಂಡಿತು. ' ಕೋದಂಡವನ್ನು ಹಿಡಿದು ರಾಮನು ಬಹಳ ಗಂಭೀರಪುರುಷನಾಗಿ ನಿಂತು ಅದನ್ನು ಬಗ್ಗಿಸಿ ಹೆದೆಯೇರಿಸಿದನು.





# ದುಷ್ಟತ್ರಯರು

ಅನೇಕ ವರ್ಷಗಳ ಹಿಂದೆ ಪರಿಷ್ಯಾ ದೇಶದಲ್ಲಿ ಅಬೂ ತಮ್ಮಾಮ್ ಎಂಬ ವರ್ತಕನೊಬ್ಬನಿದ್ದನು. ಅವನು ತುಂಬಾ ವಾಕ್ಚಾತುರ್ಯ ಉಳ್ಳವನು. ಒಳ್ಳೆಯ ಪ್ರಾಮಾಣಿಕ ಗುಣದವನು. ಈ ಕಾರಣಗಳಿಂದ ವ್ಯಾಪಾರದಲ್ಲಿ ಅವನಿಗೆ ಒಳ್ಳೆಯ ಲಾಭವಾಗಿ ದೊಡ್ಡ ಧನವಂತನೂ ಆಗಿದ್ದನು.

ಆ ನಗರವನ್ನಾಳುವ ರಾಜನಿಗೆ ಅಬೂನ ಪ್ರಭಾವವನ್ನೂ ಸಂಪತ್ತನ್ನೂ ನೋಡುತ್ತಿದ್ದ ಹಾಗೆ ಈರ್ಷ್ಯೆಯುಂಟಾಯಿತು. ಆ ಸಂಗತಿ ಅಬೂ ತಮ್ಮಾಮ್‌ಗೆ ತಿಳಿದುದರಿಂದ, ಇನ್ನು ಆ ಊರಿನಲ್ಲಿರುವುದು ಕ್ಷೇಮವಲ್ಲವೆಂದುಕೊಂಡು, ಅಲ್ಯಾನ್‌ಷಾ ಎಂಬ ರಾಜನು ಪಾಲಿಸುವ ನೆರೆಯ ದೇಶಕ್ಕೆ ಹೋದನು. ಅಲ್ಯಾನ್ ಷಾ ಯುವಕನಾಗಿದ್ದನು. ಧರ್ಮ ತಪ್ಪದೆ ನಡೆಯುವವನೆಂದು ಅವನಿಗೆ ಒಳ್ಳೆಯ ಹೆಸರಿದ್ದಿತು.

ಅವನು ಅಬೂನ ಸಂಗತಿಯನ್ನು ಕೇಳಿ, ಅವನನ್ನು ನೋಡಲು ಆಶಿಸುವೆನೆಂದು ಹೇಳಿಕಳುಹಿಸಿದನು. ಅಬೂ ಬೆಲೆ ಬಾಳುವ ಕಾಣಿಕೆ ವಸ್ತುಗಳನ್ನು ತೆಗೆದುಕೊಂಡು ಹೋಗಿ ರಾಜನ ದರ್ಶನ ಮಾಡಿದನು. ಹಾಗು ತನ್ನ ವಿನಯ ಪ್ರವರ್ತನೆಗಳಿಂದ, ಚಾತುರ್ಯವಾದ ಮಾತುಗಳಿಂದ ಆ ರಾಜನನ್ನು ಸಂತೋಷಗೊಳಿಸಿದನು. ರಾಜನು ಅವನನ್ನು ನೋಡಿ ದಿನಾ ತನ್ನ ದರ್ಶನಕ್ಕೆ ಬರಬೇಕೆಂದು ಕೇಳಿಕೊಂಡನು.

ಆದಕ್ಕೆ ಅಬೂ ವಿನಯದಿಂದ ತಲೆಬಾಗಿ, "ಪ್ರಭೊ ಸ್ವಲ್ಪ ದೂರದಲ್ಲಿದ್ದು ನಿಮ್ಮ ಸೇವೆ ಮಾಡಬೇಕೆಂದಿದ್ದೇನೆ. ಯಾವಾಗಲೂ ಮಹಾರಾಜರ ಹತ್ತಿರವೇ ಇರುವುದು ಅಷ್ಟು ಒಳ್ಳೆಯದಲ್ಲ. ಅದು ನನ್ನ ಮೇಲೆ ಇತರರಿಗೆ ಈರ್ಷ್ಯಾಸೂಯೆಗಳು ಬರಲು ಕಾರಣವಾಗುತ್ತದೆ" ಎಂದನು.

ರಾಜನು ಆ ಮಾತುಗಳನ್ನು ಅಷ್ಟಾಗಿ ಹಚ್ಚಿಕೊಳ್ಳಲಿಲ್ಲ. ಏನಾದರೂ ಸಮಸ್ಯೆ ಬಂದಾಗ ಅವನು ತನ್ನ ಮೂವರು ವಜೀರರೊಂದಿಗೆ ಮಾತ್ರವಲ್ಲದೆ, ಅಬೂನೊಂದಿಗೆ ಕೂಡಾ ವಿಚಾರಿಸಲು ಪ್ರಾರಂಭಿಸಿದನು. ಇದು ವಜೀರರಿಗೆ ಕೋಪ ಉಂಟಾಗಲು ಕಾರಣವಾಯಿತು.

ಒಂದು ದಿನ ಮೂವರು ವಜೀರರು ಒಂದೆಡೆ ಕಲೆತುಕೊಂಡರು. ಆಗ ಅವರಲ್ಲಿ ಒಬ್ಬನು, "ಈ ಅಬೂ ತಮ್ಮಾಮ್ ಸಾಧಾರಣದ ಆಸಾಮಿಯಲ್ಲ. ರಾಜನನ್ನೇ ತನ್ನ ಬಲೆಯಲ್ಲಿ ಹಾಕಿಕೊಂಡಿದ್ದಾನೆ.



"ಇದಕ್ಕೆ ಏನು ಮಾಡೋಣ?" ಎಂದನು. ಆದಕ್ಕೆ ಇನ್ನೊಬ್ಬ ವಜೀರ, "ಅವನಿಗೆ ಅಂತ್ಯ ತೋರಿಸಿಬಿಡಬೇಕು. ಆದಕ್ಕೊಂದು ದಾರಿಯೂ ಇದೆ. ಟರ್ಕೀ ರಾಜನ ಮಗಳು ಅಪ್ಸರಸಿಯನ್ನು ನಾಚಿಸುವಷ್ಟು ಸುಂದರಿ ಎಂದು ನಾವು ಕೇಳಿದ್ದೇವಷ್ಟೆ? ಬಹಳ ಮಂದಿ ರಾಜರು ಆ ಹುಡುಗಿಯನ್ನು ಮದುವೆ ಮಾಡಿಕೊಳ್ಳಲು ರಾಯಭಾರ ಕಳುಹಿಸಿದ್ದಾರೆ. ಆದರೆ ಅವರಲ್ಲಿ ಒಬ್ಬರು ಕೂಡಾ ಹಿಂದಿರುಗಿ ಬಂದುದಿಲ್ಲ. ಬಹುಶಃ ಟರ್ಕೀ ರಾಜನು ಅವರನ್ನು ಕೊಲ್ಲಿಸಿರಬಹುದು. ನಮ್ಮ ರಾಜನಿಗೆ ಇನ್ನೂ ಮದುವೆಯಾಗಿಲ್ಲವಷ್ಟೆ? ನಾವು ಆ ಟರ್ಕೀ ರಾಜನ ಮಗಳ ಅಂದಚೆಂದಗಳನ್ನು ಕುರಿತು ನಮ್ಮ ರಾಜನ ಹತ್ತಿರ ಬಾಯ್ತುಂಬಾರೂರುವ ಹಾಗೆ ಹೇಳೋಣ. ಮದುವೆಯ ರಾಯಭಾರಕ್ಕೆ ಅಬೂನನ್ನು ಕಳುಹಿಸುವುದು ಒಳ್ಳೆಯದೆಂದೂ ತಿಳಿಸೋಣ. ಆಗ ನಮ್ಮ ಉದ್ದೇಶ ಸಿದ್ಧಿಸುತ್ತದೆ" ಎಂದನು.

ಅಬೂ ತಮ್ಮಾಮ್ ಪ್ರಪಂಚದಲ್ಲಿಲ್ಲದಂತೆ ಮಾಡಲು ಇದು ಬಹು ಗಟ್ಟಿಯಾದ ಉಪಾಯವೆಂದು ಉಳಿದಿಬ್ಬರು ವಜೀರರೂ ಹೇಳಿದರು. ಅನಂತರ ಅವರು ರಾಜನ ಮುಂದೆ ಅವನ ಮದುವೆ ಪ್ರಸ್ತಾಪವನ್ನೆತ್ತಿ, ಟರ್ಕಿ ರಾಜನ ಕುಮಾರಿಯ ಸೌಂದರ್ಯವನ್ನು ಕುರಿತು ಬಹು ಚೆನ್ನಾಗಿ ಹೆಣೆದು ವರ್ಣಿಸಿ ಹೇಳತೊಡಗಿದರು. ಹೀಗೆ ಕೆಲವು ದಿನಗಳು ಸಾಗಲು ರಾಜನಿಗೆ ಟರ್ಕೀ ರಾಜಕುಮಾರಿಯ ಮೇಲೆ ಆಸಕ್ತಿ ಹುಟ್ಟಿತು.

"ಸರಿ. ಅವಳನ್ನೇ ಮದುವೆಯಾಗುತ್ತೇನೆ. ಈಗ ಟರ್ಕೀ ರಾಜನ ಹತ್ತಿರ ಮದುವೆಯ ರಾಯಭಾರಕ್ಕೆ ಯಾರನ್ನು ಕಳುಹಿಸಬಹುದೆನ್ನುವಿರಿ?" ಎಂದು ಕೇಳಿದನು ರಾಜ.

"ಪ್ರಭೂ, ಈ ಕೆಲಸ ಸುಗಮವಾಗಿ ನೆರವೇರುವುದು ಅಲ್ಲಿಗೆ ಹೋಗುವ ರಾಯಭಾರಿಯ ವಾಕ್ಚಾತುರ್ಯವನ್ನು ಹೊಂದಿಕೊಂಡಿದೆ. ಅವನು ಮೊದಲು ಟರ್ಕೀ ರಾಜನನ್ನು ಮೆಚ್ಚಿಸಬೇಕು. ಬುದ್ಧಿ ಚಾತುರ್ಯವೂ ರಾಜ ಮರ್ಯಾದೆಯೂ ಚೆನ್ನಾಗಿ ತಿಳಿದು ಮಾತಾಡುವವನಾಗಿರಬೇಕು" ಎಂದನು ಒಬ್ಬ ವಜೀರ.

"ಹೌದು ಹೌದು. ಈ ಯೋಗ್ಯತೆಗಳೆಲ್ಲ ಇರುವವನೆಂದರೆ ಅಬೂ ತಮ್ಮಾಮ್ ಒಬ್ಬನೇ ಎಂದು ನನ್ನ ವಿನಮ್ರವಾದ ಅಭಿಪ್ರಾಯ" ಎಂದನು ಇನ್ನೊಬ್ಬ ವಜೀರ.

ರಾಜನು ಅಬೂ ತಮ್ಮಾಮ್ಮನ್ನು ತನ್ನ ಮದುವೆಯ ರಾಯಭಾರದ ಕೆಲಸಕ್ಕೆ ಟರ್ಕೀ ರಾಜನ ಬಳಿಗೆ ಕಳುಹಿಸಿದನು. ಟರ್ಕಿ ರಾಜನು ಅವನಿಗೆ ತಕ್ಕ ಮರ್ಯಾದೆಮಾಡಿ, "ಸರಿ, ನನ್ನ ಮಗಳಿಗೆ ಮದುವೆಯಾಗಬೇಕಾದ್ದು ನ್ಯಾಯವೆ! ನೀನು ಹೋಗಿ ನನ್ನ ಕುಮಾರಿಯನ್ನು ನೋಡು." ಎಂದು ಅಬೂನನ್ನು ತನ್ನ ಮಗಳ ಬಳಿಗೆ ಕಳುಹಿಸಿದನು.



ಸೇವಕರು ಅಬೂನನ್ನು ರಾಜಕುಮಾರಿ ಇರುವ ಭವನಕ್ಕೆ ಕರೆದುಕೊಂಡು ಹೋದರು. ಅವನು ಅವಳಿಗೆ ನಮಸ್ಕಾರ ಮಾಡುತ್ತ, ಒಂದೇ ಒಂದು ಸಾರಿ ಅವಳನ್ನು ನೋಡಿ, ಅಲ್ಲಿದ್ದ ತಿವಾಸಿಯ ಮೇಲೆ ತಲೆತಗ್ಗಿಸಿ ಕುಳಿತನು.

ಹಾಗೆ ಅವನು ಕುಳಿತು ನಾಲ್ಕೈದು ಕ್ಷಣಗಳಾದ ಮೇಲೆ ರಾಜಕುಮಾರಿ ಅಬೂನೊಂದಿಗೆ, "ಅಲ್ಲಿರುವ ಬಹುಮಾನ ವಸ್ತುಗಳು ನಿಮಗಾಗಿಯೇ" ಎನ್ನುತ್ತ, ಸಮೀಪದಲ್ಲಿದ್ದ ಬೆಳ್ಳಿಯ ಹರಿವಾಣವನ್ನು ತೋರಿಸಿದಳು. ಅದರಲ್ಲಿ ಬೆಲೆಬಾಳುವ ಬಗೆಬಗೆಯ ಚಿನ್ನದ ನಗಗಳು ಇದ್ದುವು.

ಆಮೇಲೆ ರಾಜಕುಮಾರಿ ಅಲ್ಲಿಂದ ಹೋಗಿಬಿಟ್ಟಳು. ಸ್ವಲ್ಪ ಹೊತ್ತು ಅಲ್ಲೇ ಕುಳಿತಿದ್ದ ಅಬೂ, ಆಮೇಲೆ ಅಲ್ಲಿಂದ ಎದ್ದು ರಾಜನ ದರ್ಶನಕ್ಕೆ ಹಿಂದಿರುಗಿದನು. ಅವನನ್ನು ನೋಡಿ ರಾಜನು, "ಏನಯ್ಯಾ, ನನ್ನ ಮಗಳು ನೀನು ಕುರುಡ, ಕಿವುಡ, ಮೂಕನೆಂದು ಹೇಳಿದಳು. ಏನು ಸಮಾಚಾರ?" ಎಂದು ಕೇಳಿದನು.

"ಪ್ರಭೂ, ನಮ್ಮ ರಾಜನು ನಿಮ್ಮ ಕುಮಾರಿಯನ್ನು ಮದುವೆಯಾಗಲು ಬಯಸಿ ಇದನ್ನು ನಿಮಗೆ ಬಿನ್ನವಿಸಲು ನನ್ನನ್ನು ಕಳುಹಿಸಿದ್ದಾರೆ. ಅವಳನ್ನು ಚೆನ್ನಾಗಿ ನಖಶಿಖಪರ್ಯಂತ ನೋಡಿ ಬರಲು ಕಳಿಸಲಿಲ್ಲ. ಆಕೆಯನ್ನು ತಲೆಯೆತ್ತಿ ನಾನು ನೋಡುವುದು ಮರ್ಯಾದೆಯಾಗಲಾರದು. ಅವಳು ಮಾತಾಡಿದುದನ್ನೆಲ್ಲಾ ಕೇಳಿದೆನು. ಉತ್ತರವನ್ನು ತಮ್ಮ ಮುಂದೆ ಬಿನ್ನವಿಸುತ್ತೇನೆ" ಎಂದನು.

"ಚೆನ್ನಾಗಿದೆ, ನ್ಯಾಯವಾಗಿದೆ, ಮತ್ತೆ ಬಹುಮಾನವನ್ನು ಕಣ್ಣೆತ್ತಿಯೂ ನೋಡದೆ ನಿರಾಕರಿಸಿದೆಯೇಕೆ?" ಎಂದು ಟರ್ಕೀ ರಾಜನು ಕೇಳಿದನು.

"ನಮ್ಮ ರಾಜನ ಬಯಕೆಯನ್ನು ತಾವು ಅಂಗೀಕರಿಸಿಕೊಂಡಿರೋ ಇಲ್ಲವೋ ಎಂಬುದನ್ನು ಮುಂದಾಗಿ ತಿಳಿದುಕೊಳ್ಳದೆ ಬಹುಮಾನಗಳನ್ನು ತೆಗೆದುಕೊಳ್ಳುವುದು ನಮ್ಮ ಪದ್ಧತಿಯಲ್ಲ. ಆದುದರಿಂದ ಅದನ್ನು ಹಾಗೆಯೇ ಬಿಟ್ಟು ತಮ್ಮ ಬಳಿಗೆ ಬಂದೆನು" ಎಂದನು ಅಬೂ ತಮ್ಮಾಮ್.

ಅಬೂ ಹೇಳಿದ ಉತ್ತರವನ್ನು ಕೇಳಿದ ಕೂಡಲೇ ರಾಜನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. "ನಿನಗೇ ಇಷ್ಟು ನ್ಯಾಯನಿಷ್ಠೆ ಇದ್ದರೆ ನಿಮ್ಮ ರಾಜನಿಗೆ ಎಷ್ಟಿರಬೇಡ! ಈ ಮೊದಲು ಬಂದ ಮದುವೆಯ ರಾಯಭಾರಿಗಳು, ನನ್ನ ಕುಮಾರಿಯನ್ನು ನೋಡಿದ ಕೂಡಲೇ ತಾವು ಬಂದ ಕೆಲಸ ಮರೆತು, ಅವಳನ್ನೇ ಎವೆಯಿಕ್ಕದೆ ನೋಡುತ್ತ, ಅರ್ಥವಿಲ್ಲದ ವಾಚಾಳಿತನವನ್ನು ಪ್ರದರ್ಶಿಸಿದ್ದರು. ಕೊಟ್ಟ ಬಹುಮಾನಗಳನ್ನು ಭಿಕ್ಷುಕರ ಹಾಗೆ ಅತ್ಯಾತುರದಿಂದ ತೆಗೆದುಕೊಂಡು ದುಸ್ತುಗಳಲ್ಲಿ ಭದ್ರಪಡಿಸಿಕೊಳ್ಳುತ್ತಿದ್ದರು. ಆ ಕಾರಣದಿಂದ ಅವರಿಗೆಲ್ಲ ಹಿಡಿದ ದುರ್ಗತಿ ಏನು ಗೊತ್ತೇ, ನೋಡು"



ಎಂದು ಅಲ್ಲಿಯೇ ಇದ್ದ ಕೋಣೆಯ ಕಿಟಿಕಿಯ ಬಾಗಿಲುಗಳನ್ನು ತೆರೆದು ಆಕಡೆ ತೋರಿಸಿದನು.

ಕೆಳಗೆ ಕಾಣಿಸಿದ ದೊಡ್ಡದೊಂದು ಖಾಲೀ ಜಾಗದಲ್ಲಿ ಖೈದಿಗಳಾಗಿದ್ದ ಇತರ ರಾಜರ ರಾಯಭಾರಿಗಳು ಬಾಡಿದಮೋರೆಗಳಲ್ಲಿರುವುದನ್ನು ಅಬೂ ನೋಡಿದನು.

"ಈಗ ಕೇಳು. ನಮ್ಮ ಕುಮಾರಿಯನ್ನು ನಿಮ್ಮ ರಾಜನಿಗೆ ಕೊಟ್ಟು ಮದುವೆ ಮಾಡಲು ನಮಗೇನೂ ಅಭ್ಯಂತರವಿಲ್ಲ. ಇನ್ನು ಅವಳು ಕೊಟ್ಟ ಬಹುಮಾನಗಳನ್ನು ನೀನು ತೆಗೆದುಕೊಳ್ಳಬಹುದು" ಎಂದನು ಟರ್ಕೀ ರಾಜ.

ಮುಂದೆ ಒಂದು ತಿಂಗಳು ಪೂರ್ತಿಯಾಗುವುದರೊಳಗೆ ಟರ್ಕೀ ರಾಜನ ಕುಮಾರಿಯೊಂದಿಗೆ ಅಲ್ಮಾನ್ ಷಾ ರಾಜನ ಮದುವೆ ನಡೆದುಹೋಯಿತು. ಆ ಶುಭ ಸಮಯದಲ್ಲಿ, ತಾನು ಖೈದಿನಲ್ಲಿರಿಸಿದ ರಾಯಭಾರಿಗಳನ್ನೆಲ್ಲಾ ಟರ್ಕೀ ರಾಜನು ಬಿಡುಗಡೆ ಮಾಡಿ, ಉಪಚರಿಸಿದನು.

ಈ ರೀತಿಯಾಗಿ ಅಬೂ ತಮ್ಮಾಮ್ ರಾಯಭಾರವು ಸಫಲವಾದುದನ್ನು ನೋಡಿ, ಮೂವರು ವಜೀರರೂ ದ್ವೇಷದಿಂದ ಉರಿಯತೊಡಗಿದರು. ಅವರು ಅಬೂನನನ್ನು ನಾಶಮಾಡಲು ಮತ್ತೊಂದು ದುಷ್ಟ ಪಥಕವನ್ನು ಆಲೋಚಿಸಿ, ಆ ಕೆಲಸವನ್ನು ರಾಜನಿಗೆ ರಾತ್ರಿಯಲ್ಲಿ ಕಾಲು ಒತ್ತುವ ಇಬ್ಬರಿಗೆ ವಹಿಸಿಕೊಟ್ಟರು. ಅವರು ಏನು ಮಾಡಬೇಕೆಂಬುದನ್ನೆಲ್ಲಾ ಹೇಳಿ, ಒಂದು ಚೀಲ ಬಂಗಾರದ ನಾಣ್ಯಗಳನ್ನೂ ಅವರಿಗೆ ಕೊಟ್ಟರು.

ಮಧ್ಯ ರಾತ್ರಿಯ ಸಮಯದಲ್ಲಿ ರಾಜನ ಕಾಲೊತ್ತುವ ಆ ಹುಡುಗರಿಬ್ಬರೂ, ರಾಜನ ಕಾಲುಗಳನ್ನು ಒಸುಕುತ್ತ, ರಾಜನು ಕಣ್ಣು ಮುಚ್ಚಿಕೊಂಡಿರುವಾಗ, ಅವನು ಗಾಢ ನಿದ್ರೆಯಲ್ಲಿರುವುದಾಗಿ ತಾವು ಅಂದುಕೊಂಡಂತೆ, ತಮ್ಮ ಸಂಭಾಷಣೆಯನ್ನು ಈ ರೀತಿಯಾಗಿ ಪ್ರಾರಂಭಿಸಿದರು.

ಅವರಲ್ಲೊಬ್ಬನು, "ಆ ವಂಚಕನ ಜಂಬದ ಮಾತು ಕೇಳಿದಿಯಪ್ಪ?" ಎಂದನು.

"ಯಾವ ವಂಚಕ?" ಎಂದು ಎರಡನೆಯವನು ಕೇಳಿದನು.

"ಇರುವುದೇ ಒಬ್ಬ ವಂಚಕ. ಅವನೇ ಅಬೂ ತಮ್ಮಾಮ್. ಮಹಾರಾಜರ ಹೊರತು ಉಳಿದೆಲ್ಲರಿಗೂ ಅವನೊಬ್ಬ ವಂಚಕನೇ ಎಂದು ಗೊತ್ತಿದೆ" ಎಂದನು ಮೊದಲನೆಯವನು.

"ಆ ಟರ್ಕೀ ರಾಜನು ತನ್ನ ಬುದ್ಧಿ ಚಾತುರ್ಯದ ಕಾರಣದಿಂದಲೇ ತನ್ನ ಕುಮಾರಿಯನ್ನು ನಮ್ಮ ಮಹಾರಾಜರಿಗೆ ಕೊಡಲು ಅಂಗೀಕರಿಸಿದನಂತೆ. ಅಷ್ಟೇ ಅಲ್ಲದೆ ರಾಜಕುಮಾರಿಗೆ ಕೂಡಾ ಅವನ ಮೇಲೆ ಬಹಳ ಇಷ್ಟವಂತೆ. ಇದೇ ಒಳಗುಟ್ಟು." ಎಂದನು ಎರಡನೆಯವನು.

"ಹಾಗೇನು! ಈ ಅಬೂ ತಮ್ಮಾಮ್ ಬಹಳ ದುಷ್ಟನೆಂದು ಬಹಳ ಮಂದಿಗೆ ಗೊತ್ತಿದ್ದ ಹಾಗೆ

ನನಗೂ ಗೊತ್ತಿದೆ. ಆದರೆ ಅವನು ಇಷ್ಟು ದೊಡ್ಡ ದುಷ್ಟನೆಂದು ಮಾತ್ರ ನಾನು ಅಂದುಕೊಳ್ಳಲಿಲ್ಲ" ಎಂದನು ಮೊದಲನೆಯವನು.

ರಾಜನು ಎಚ್ಚರದಲ್ಲೇ ಇದ್ದುದರಿಂದ ತನ್ನ ಸೇವಕರ ಸಂಭಾಷಣೆಗಳನ್ನು ಕೇಳಿಕೊಂಡನು. ಅವನು ಬೆಳಗಾದ ಕೂಡಲೇ ಮೊದಲು ಮಾಡಿದ ಕೆಲಸವೆಂದರೆ, ಅಬೂ ತಮ್ಮಾಮ್‌ನನ್ನು ಜೈಲಿನಲ್ಲಿ ಹಾಕಿಸಿಬಿಟ್ಟನು.

ಕೆಲವು ದಿನಗಳು ಕಳೆದ ಮೇಲೆ, ಒಂದು ದಿನ ರಾತ್ರಿ ಯಾರೋ ಇಬ್ಬರು ನೌಕರರು ತಮ್ಮೊಳಗೆ ಜಗಳಾಡಿಕೊಳ್ಳುತ್ತ ಕೂಗಾಡುವುದು ಕೇಳಿಸಿತು. ರಾಜನು ಕೋಣೆಯಿಂದ ಹೊರಗೆ ಬಂದು ಶಬ್ದ ಮಾಡದೆ ನೌಕರರ ನಿವಾಸದ ಕಡೆಗೆ ಹೋದನು. ಅಲ್ಲಿ ತನಗೆ ಕಾಲೊತ್ತುವ ಹುಡುಗರಿಬ್ಬರೂ ಜಗಳಾಡಿಕೊಂಡಿರುವುದನ್ನು ನೋಡಿದನು.

"ನನಗೆ ಆ ಬಂಗಾರದ ನಾಣ್ಯಗಳಲ್ಲಿ ಮೂರು ಪಾಲು ಸಿಗಲೇಬೇಕು. ಆ ರಾತ್ರಿ ನಿನಗಿಂತ ನಾನೇ ಹೆಚ್ಚಿಗೆ ಮಾತಾಡಿದ್ದು. ಚೀಲವನ್ನೂ ಅವರು ನನ್ನ ಕೈಗೇ ಕೊಟ್ಟಿದ್ದಾರೆ" ಎಂದನು ಒಬ್ಬ.

ಎರಡನೆಯವನು ಅದಕ್ಕೆ ಒಪ್ಪದೆ, "ನಾವು ಅರ್ಧರ್ಧ ತೆಗೆದುಕೊಳ್ಳಬೇಕೆಂತಲೇ ಕೊಟ್ಟದ್ದು. ಅದೇ ನ್ಯಾಯ! ಎಷ್ಟು ಮಾತ್ರಕ್ಕೂ ನಾನು ಒಪ್ಪಲಾರೆ" ಎಂದನು. ಅದಕ್ಕೆ ಉತ್ತರವಾಗಿ ಎರಡನೆಯವನಿಗೆ ಮುಷ್ಟಿಘಾತವು ಸಿಕ್ಕಿತು.

ರಾಜನು ತನ್ನ ಅಂಗರಕ್ಷಕರನ್ನು ಕರೆದು ಆ ಹುಡುಗರನ್ನು ತನ್ನ ಕೋಣೆಗೆ ಎಳೆದು ತರುವಂತೆ ಆಜ್ಞೆ ಮಾಡಿದನು. ಅಲ್ಲಿ ಅವರಿಬ್ಬರೂ ತಮ್ಮ ಜಗಳಾಟದ ಕಾರಣ ಹೇಳಿ, ಮೂವರು ವಜೀರರೂ ತಮಗೆ ಬಂಗಾರದ ನಾಣ್ಯಗಳ ಆಶೆ ಹಚ್ಚಿ, ಏನು ಮಾಡಬೇಕೆಂದು ಹೇಳಿಕೊಟ್ಟುದರಿಂದಲೇ, ಆ ದಿನ ರಾತ್ರಿ ಅಬೂ ತಮ್ಮಾಮ್‌ನ್ನು ಕುರಿತು ಸುಳ್ಳು ಹೇಳಿದೆವೆಂದು ಒಪ್ಪಿಕೊಂಡರು.

ರಾಜನು ಆ ಕ್ಷಣದಲ್ಲೇ ಅಬೂ ತಮ್ಮಾಮ್‌ನ್ನು ಜೈಲಿನಿಂದ ಬರಮಾಡಿಸಿ, ನಡೆದ ಸಂಗತಿಗಾಗಿ ಕ್ಷಮೆ ಕೇಳಿದನು.

"ಪ್ರಭೂ, ಮೊದಲೇ ತಮ್ಮ ಮುಂದೆ ವಿಜ್ಞಾಪಿಸಿಕೊಂಡಿದ್ದೇನಷ್ಟೆ? ತಮ್ಮ ಸಮೀಪದಲ್ಲಿದ್ದರೆ ನನಗೆ ಅಪಾಯ ಬರುತ್ತದೆಂದು? ಇದರಲ್ಲಿ ಕ್ಷಮಿಸಲಿಕ್ಕೆ ನಾನೆಷ್ಟರವನು?" ಎಂದನು ಅಬೂ ತಮ್ಮಾಮ್ ಮುಗುಳು ನಗುತ್ತ.

ರಾಜನು ಸಂತೋಷದಿಂದ ತಲೆಯಾಡಿಸಿ ದುಷ್ಟರಾದ ಮೂವರು ವಜೀರರನ್ನು ತಕ್ಕ ವಿಧವಾಗಿ ಶಿಕ್ಷಿಸಿ, ಅಬೂನನ್ನು ತನ್ನ ಪ್ರಧಾನ ವಜೀರನಾಗಿ ನಿಯಮಿಸಿಕೊಂಡನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೪ ಫೆಬ್ರವರಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



Devidas Kasbekar



B. Prasad

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಡಿಸೆಂಬರ್ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

### ಅಕ್ಟೋಬರ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : **ಲಾಡು ಎತ್ತಿಕೊಂಡು ಹೋಗೋ ಹಾಗೆ**

ಎರಡನೇ ಫೋಟೋ : **ಬೀಡು ಎತ್ತಿಕೊಂಡು ಹೋಗಲು ಸಾಧ್ಯವೆ?**

ಕಳುಹಿಸಿದವರು : ಪಿ. ಎನ್. ವೆಂಕಟರಾಮನ್, ಸೌಕಾರ್ ಪೇಟೆ, ಮದರಾಸು-೩

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು : -

೧. ಒಟ್ಟು ಮಾನವ ಶರೀರದಲ್ಲಿ ಐವತ್ತು ಸಾವಿರ ಮೈಲು ಉದ್ದದ ರಕ್ತನಾಳಗಳಿರುತ್ತವೆ. ೨. ಹದಿನೇಳು ಸಾವಿರ ಬಣ್ಣಗಳನ್ನು ಗುರುತಿಸಬಲ್ಲುದು. ೩. ಹತ್ತು ಸಾವಿರ ವಾಸನೆಗಳನ್ನು ಗುರುತಿಸುತ್ತದೆ. ೪. ಆಂಗ್ಲ ಭಾಷೆ; ಸುಮಾರು ಎಂಟು ಲಕ್ಷ ಪದಗಳಿರುತ್ತವೆ. ೫. ಲಿಯೊನಾರ್ಡೋ ಡಾ ವಿನ್ಸೀ.

**Results of Chandamama Camlin Colouring Contest No. 32 (Kannada)**

*1st Prize:* Shrigajanam T.A, Yellapur. *2nd Prize:* K. Sunitha, Banglore-70. Poornashri M Badiger, Bijapur-586 101. Kumarswami S Mukurtihalnath, Nidagund. *3rd Prize:* M. Bharathi Nayak, Manglore-575 003. J. Jayashree, Udupi, Bhimaraya M Kumbar, Bijapur. K. Shalini, Moodubelle. S. Gurudev, Yielhanka. K. Prathiba, Banglore-11. G.R. Meena, Banglore-4. Mahesh Kulkarni, Bidar-585 401. K.C. Chiddharnadha, Dodbalapure-561 203. G. Lalitha, Banglore-27.




2

[ಪಿಂಗಳನು ನದೀ ಗರ್ಭದ ಪಾಳು ದೇವಾಲಯದ ಮೊದಲನೇ ದ್ವಾರವನ್ನು ಗೆದ್ದು ದಾಟಿ, ಎರಡನೇ ದ್ವಾರದಲ್ಲಿ ಇದಿರಾದ ಅಪಾಯವನ್ನೂ ಹತಮಾಡಿದನು. ಹಾಗೆಯೇ ಐದು ದ್ವಾರಗಳನ್ನೂ ಅಲ್ಲಲ್ಲಿಯ ಅಪಾಯಗಳನ್ನು ಗೆದ್ದು ಪಾರಾಗಿ ಆರನೇ ದ್ವಾರಕ್ಕೆ ಹೋದನು. ಅಲ್ಲಿ ಪದ್ಮಪಾದನ ರೂಪದಲ್ಲಿದ್ದ ಮಾಯಾ ರಾಕ್ಷಸಿಯಿಂದ ಪೆಟ್ಟು ತಿಂದು ಆಕಾಶಕ್ಕೆ ಬೀಸಿ ಒಗೆಯಲ್ಪಟ್ಟನು.]

ದೂರ ಆಕಾಶಕ್ಕೆ ಬಿಸುಡಲ್ಪಟ್ಟು ನೆಲಕ್ಕೆ ಬೀಳುವ ಪಿಂಗಳನಿಗೆ, ಕೈಚಾಚಿ ನಿಂತಿರುವ ಪದ್ಮಪಾದನನ್ನು ನೋಡಿ ಸಾಯುವೆನೆಂಬ ಭೀತಿ ಹಾರಿಹೋಯಿತು. ಮರುಕ್ಷಣದಲ್ಲಿ ಅವನು ಪದ್ಮಪಾದನ ಕೈಗಳ ಮೇಲೆ ಬಿದ್ದೂ ಆಯಿತು. ಆಹಾ! ಪದ್ಮಪಾದನು ಎಷ್ಟು ಗಟ್ಟಿಗನೋ! ನೆಲಕ್ಕೆ ಬಿದ್ದು ತಲೆಯೊಡೆಯದಂತೆ ಸಮಯಕ್ಕೆ ಎದ್ದು ತನ್ನನ್ನು ಹಿಡಿದು ಕಾಪಾಡಿದನೆಂದು ಪಿಂಗಳನು ಸಂತಸಪಡುತ್ತಿರಲು, ಪದ್ಮಪಾದನು ಅವನನ್ನು ಹಗುರಾಗಿ ಇಳಿಸಿ ನೆಲದಲ್ಲಿ ನಿಲ್ಲಿಸಿದನು.

"ಪಿಂಗಳಾ! ಏನಾಯಿತು? ಅಪಾಯಕಾರಿಯಾದ ಪೆಟ್ಟು ಬಿದ್ದಿಲ್ಲವಷ್ಟೇ? ಚೆನ್ನಾಗಿರುವೆಯಾ ಅಪ್ಪಾ?" ಎಂದು ವಾತ್ಸಲ್ಯದಿಂದ ಕೇಳಿದನು ಪದ್ಮಪಾದ. "ಹಾಗೇನಾಗಿಲ್ಲ. ನಿಮ್ಮ ಬಲ ನನ್ನಲ್ಲಿ ಸೇರಿಸಿರುವಾಗ ಪೆಟ್ಟು ಗಿಟ್ಟು ಹೇಗೆ ಬಿದ್ದೀತು? ಕಡೆಗೆ ಭೂತದ ಮಾಯೆಯಿಂದ ಸ್ವಲ್ಪ ಮೋಸ ಹೋಗಿಬಿಟ್ಟೆ. ನೀವು ನನ್ನನ್ನು ಸಾಯದಂತೆ ಬದುಕಿಸಿಬಿಟ್ಟಿರಿ. ನಿಮ್ಮ ಬೆಂಬಲ ಗಟ್ಟಿಯಾಗಿ ಇರುವಾಗ ಯಾವ ಭಯವೂ ಇನ್ನಿಲ್ಲ" ಎಂದು ಪಿಂಗಳನು ಹಿಂದಿರುಗಿ ನೋಡಿದನು.




ಅವನು ನೋಡುತ್ತಿರುವಾಗಲೇ, ಅದುವರೆಗೂ ಒಂದು ಬೊಟ್ಟೂ ನೀರಿಲ್ಲದೆ ಬತ್ತಿಹೋದ ನದಿ ಭುಸ್ಸೆಂದು ಒಮ್ಮೆಗೇ ನೀರಿನಿಂದ ಉಕ್ಕಲು ತೊಡಗಿತ್ತು ! ಅದನ್ನು ನೋಡಿ ಪಿಂಗಳನು ಅದುರಿ ಬಿದ್ದು " ಹೋ !" ಎಂದು ಕೂಗಿದನು.

ಪದ್ಮಪಾದನು ಪಿಂಗಳನ ಭುಜದ ಮೇಲೆ ತಟ್ಟುತ್ತ, " ಹೋಗಲಿಬಿಡೂ ಪಿಂಗಳಾ, ಈಸಾರಿ ನಾವು ಸೋತೆವು. ಮಹಾಮಾಯನ ಶಿಷ್ಯರು ನದಿಯನ್ನು ಮತ್ತೆ ನೀರಿನಿಂದ ತುಂಬಿಸುತ್ತಿದ್ದಾರೆ. ದೇವಾಲಯ ಕೂಡಾ ಮುಳುಗಿ ಕಾಣದೆ ಹೋಗುತ್ತದೆ. ಇಂತಹ ಕಾರ್ಯದಲ್ಲಿ ಒಂದೆರಡು ಸೋಲುಗಳನ್ನು ನೋಡಿ ಹಿಂಜರಿಯಬಾರದು. ನಮಗೆ ಬೇಕೆಂದಾಗ ನದಿಯ ಜಲವನ್ನು ಇಂಗಿಸಿ ಹಾಕಲು ನನಗೆ ಸಾಧ್ಯವಿದೆ. ಅದಿರಲಿ, ಮೊದಲು ದೇವಾಲಯದೊಳಗೆ ಪ್ರವೇಶಿಸುವಾಗ ನಿನಗಾದ ಅನುಭವಗಳನ್ನು ಹೇಳು." ಎಂದನು.

ಪಿಂಗಳನು ತಾನು ಮೊದಲನೇ ದ್ವಾರವನ್ನು ದಾಟಿ ಆರನೇ ದ್ವಾರವನ್ನು ಸೇರುವವರೆಗೂ ನಡೆದ ಘಟನೆಗಳೆಲ್ಲವನ್ನೂ ಹೇಳಿದನು.

" ಪದ್ಮಪಾದರೇ, ಅಲ್ಲಿಯೇ ನಾನು ಮೋಸ ಹೋದುದು. ಆರನೇ ದ್ವಾರದ ಹತ್ತಿರ ಅಷ್ಟೊಂದು ಬುದ್ಧಿವಂತಿಕೆಯ ಭೂತವಿರುವುದೆಂದು ನಾನು ಊಹಿಸಿರಲಿಲ್ಲ. ನಿಮ್ಮ ಹಾಗೆಯೇ ಇತ್ತು ಆ ಭೂತ ! ನಿಲ್ಲು ನಿಲ್ಲು, ನೀನು ಯಾರೆಂದು ಪ್ರಶ್ನಿಸಿದ ಅದರ ಕಂಠಸ್ವರವೂ ಸಹಾ ನಿಮ್ಮದೇ. ನಾನು ಒಂದು ಕ್ಷಣಕಾಲ ಸಂಶಯ ತಾಳಿಬಿಟ್ಟೆನು, ಅದೇ ಕ್ಷಣದಲ್ಲಿ ನನ್ನ ಬೆನ್ನಿಗೂ ತಲೆಗೂ ದಬದಬನೆ. ಪೆಟ್ಟುಗಳು ಬಿದ್ದುವು. ಯಾವುದೋ ಬಲವಾದ ಕೈಗಳು ನನ್ನನ್ನೆತ್ತಿ ಬಿಸುಟದ್ದೂ ಆಯಿತು. ಇನ್ನು ಸತ್ತೆನೆಂದುಕೊಳ್ಳುವಾಗ ನೀವು ನನ್ನನ್ನು ಹೂವಿನ ಹಾಗೆ ಹಿಡಿದು ಕಾಪಾಡಿದಿರಿ " ಎಂದನು ಪಿಂಗಳ.

" ಹಾಗೇನು ? " ಎಂದು ಪದ್ಮಪಾದನು ಕಣ್ಣು ಕೆಕ್ಕರಿಸಿ, ನದೀ ಜಲದಲ್ಲಿ ಮುಳುಗಿ ಹೋಗುತ್ತಿರುವ ದೇವಾಲಯದ ಕಡೆಗೆ ಒಂದುಸಾರಿ ನೋಡಿದನು.

" ಪಿಂಗಳಾ ! ಮಹಾಮಾಯನ ಶಿಷ್ಯರು ಇಷ್ಟೊಂದು ನೀಚಕಾರ್ಯಕ್ಕೆ ಇಳಿಯುವರೆಂದು ನಾನು ಅಂದುಕೊಂಡಿಲ್ಲ. ನಿನ್ನ ಗುರುವಾದ ನನ್ನ ಆಕೃತಿಯಲ್ಲಿ ಮಾತ್ರವೇ ಅವರು ನಿನ್ನನ್ನು ಮೋಸ ಪಡಿಸಿದರು. ಅದಕ್ಕೆ ಮೊದಲು ಅವರು ನಿನ್ನನ್ನು ಹೆದರಿಸಲು ನೋಡಿದ ಪ್ರತಿ ದುಷ್ಟಶಕ್ತಿಯನ್ನೂ ನೀನು ಜಯಿಸಿಬಿಟ್ಟಿರುವೆ. ಅದು ನನಗೆ ಬಹಳ ಸಂತೋಷವನ್ನುಂಟುಮಾಡಿದೆ. ಒಂದು ಸಾರಿ ಸೋತದ್ದು ಗಟ್ಟಿ ವಿಜಯಕ್ಕೆ ಬುನಾದಿಯಪ್ಪಾ " ಎಂದನು.

ಪದ್ಮಪಾದನ ಮಾತುಗಳಿಂದ ಪಿಂಗಳನಿಗೆ ಬಹಳ ಉತ್ಸಾಹವಾಯಿತು. " ಈಗ ನಾವು ಏನು ಮಾಡ




ಬೇಕೆನ್ನುವಿರಿ ? ದೇವಾಲಯವು ಮತ್ತೆ ನದೀ ಗರ್ಭದಲ್ಲಿ ಮುಳುಗಿ ಹೋಗುತ್ತಾ ಇದೆ!" ಎಂದನು.

"ಹೋಗಲಿ, ಹೋಗಲಿ. ಈ ದಿನ ಅದನ್ನು ಕುರಿತು ಇನ್ನೇನೂ ಮಾಡುವಂತಹುದಿಲ್ಲ. ಇವತ್ತಿನಿಂದ ಮೂರು ದಿನಗಳ ಮೇಲೆ ಮತ್ತೆ ಪರ್ವದಿನವೊಂದು ಬರುತ್ತದೆ. ಆದಿನ ನೀನು ಮತ್ತೊಮ್ಮೆ ಮಹಾಮಾಯಿನ ಸಮಾಧಿಯ ದೇವಾಲಯಕ್ಕೆ ಹೋಗಬೇಕಾಗುತ್ತದೆ. ಅದುವರೆಗೂ ನಾವು ಇಲ್ಲಿಯೇ ಇದ್ದುಬಿಡೋಣ. ಅಪ್ಪರವರೆಗೆ ಕಾಲಕ್ಷೇಪವಾಗಬೇಕಷ್ಟೆ ?..." ಎಂದು ಪದ್ಮಪಾದನು ಕೈಯಲ್ಲಿದ್ದ ಗದೆಯನ್ನು ಆಕಾಶಕ್ಕೆತ್ತಿ ತಿರುಗಿಸುತ್ತ, ಯಾವುದೋ ಮಂತ್ರವನ್ನು ಪಠಿಸಿದನು. ಮರುಕ್ಷಣದಲ್ಲಿ ಆ ನಿರ್ಜನ ಪ್ರದೇಶದಲ್ಲಿ ಎತ್ತರವೂ ಸುಂದರವೂ ಆದ ಭವನವೊಂದು ಎದ್ದು ನಿಂತಿತು.

ಆಶ್ಚರ್ಯದಿಂದ ಆ ಮಾಯಾಭವನವನ್ನೇ ನೋಡುತ್ತಿರುವ ಪಿಂಗಳನ ಕೈ ಹಿಡಿದುಕೊಂಡು ಪದ್ಮಪಾದನು ಅವನನ್ನು ಭವನದ ಕಡೆಗೆ ನಡೆಯಿಸಿಕೊಂಡು ಹೋದನು. ಅವರಿಬ್ಬರೂ ಭವನದೊಳಗಿನ ವಿಸ್ತಾರವಾದ ಪ್ರಾಂಗಣಕ್ಕೆ ಪ್ರವೇಶಿಸಲು ನೋಡುವಾಗ, ಮುಚ್ಚಿದ್ದ ಬಾಗಿಲುಗಳು ತಟಕ್ಕನೆ ತೆರೆದುಕೊಂಡುವು. ಆಜಾನುಬಾಹುಗಳಾದ ಕರ್ರಗಿನ ಲಟ್ಟಗಟ್ಟ ಶರೀರದ ಇಬ್ಬರು, ಧಾಂಡಿಗರು ಹೊರಗೆ ಬಂದು ಪದ್ಮಪಾದನಿಗೂ ಪಿಂಗಳನಿಗೂ ಬಾಗಿ ನಮಸ್ಕಾರ ಮಾಡಿ ಕೈಕಟ್ಟಿ ಎರಡು ಬದಿಗಳಲ್ಲಿ ನಿಂತು ದಾರಿ ಬಿಟ್ಟರು.

"ಯಾರಿವರು ಪದ್ಮಪಾದರೇ ?" ಎಂದು ಪಿಂಗಳನು ಅನುಮಾನದಿಂದ ಮೆಲ್ಲನೆ ಕೇಳಿದನು.

"ಇವರು ಮೂರು ದಿನಗಳವರೆಗೆ ನಮಗೆ ವಿನೋದ ಕಾಲಕ್ಷೇಪ ಮಾಡಿಸಲು ಬಂದಿರುವ ಮಾಯಾರಕ್ಕಸರು. ನಾವು ಇಲ್ಲಿ ಮೂರುದಿನ ಸುಮ್ಮನೆ ಉಗುರುಕಚ್ಚಿಕೊಂಡು ಕುಳಿತಿರಲು ಸಾಧ್ಯವೆ ? ಈ ಪಿಶಾಚಮಲ್ಲರಿಗೆ ಬಗೆಬಗೆಯ ಕುಸ್ತಿಗಳು ಗೊತ್ತಿವೆ. ಕತ್ತಿಯುದ್ಧ ಮಾಡುತ್ತಾರೆ. ಕೋಲುಗಳಿಂದ ತಾಲೀಮು ತೋರಿಸುತ್ತಾರೆ. ಹಾಡುತ್ತಾರೆ, ಕುಣಿಯುತ್ತಾರೆ. ಎಲ್ಲಾ ನೋಡುತ್ತ ನಾವು ವಿನೋದವಾಗಿ ಕಾಲ ಕಳೆಯಬಹುದು" ಎಂದನು ಪದ್ಮಪಾದ.

ಪದ್ಮಪಾದನೂ ಪಿಂಗಳನೂ ಆ ಭವನದೊಳಗೆ ಪ್ರವೇಶಮಾಡಿದರು. ಅವರಿಬ್ಬರೂ ದೊಡ್ಡದಾದೊಂದು ದ್ವಾರದ ಮೂಲಕ ವಿಸ್ತಾರವಾದ ಕೋಣೆಯನ್ನು ಪ್ರವೇಶಿಸುವಾಗ, ಅಲ್ಲಿ ಅನೇಕ ಮಂದಿ ಮಲ್ಲರೂ, ಯೋಧರೂ ಕಸರತ್ತು ಮಾಡುತ್ತಿರುವುದು ಕಂಡಿತು. ಪಿಂಗಳನು ಅವರನ್ನು ನೋಡಿ ಅನುಮಾನದಿಂದ "ಪದ್ಮಪಾದರೇ, ಇವರೆಲ್ಲಾ ಕೂಡಿ ನಮಗೇನಾದರೂ ಕೆಡುಕು ಮಾಡಲಾರರಷ್ಟೆ ?" ಎಂದನು.




"ಅಂತಹ ಭಯ ಕನಸಿನಲ್ಲಿಯೂ ಬಾರದು" ಎಂದು ಪದ್ಮಪಾದನು ಮುಂದಕ್ಕೆ ನಡೆದನು. ಅವನು ಕೈಸನ್ನೆ ಮಾಡಿ, ಮೊದಲು ನೋಡಿದ ಕರ್ರಗಿನ ಲಟ್ಟರನ್ನು ಕರೆದು ಅವರ ಕಿವಿಯಲ್ಲಿ ಏನೋ ಹೇಳಿದನು.

ಪದ್ಮಪಾದನೂ ಪಿಂಗಳನೂ ಆ ಕೋಣೆಯಲ್ಲಿ ಅನಿಸಿಟ್ಟ ಪಟ್ಟೆಯ ಮೆತ್ತೆಗಳಿಗೆ ಒರಗಿ ಕುಳಿತರು. ಸ್ವಲ್ಪ ಹೊತ್ತಿಗೆ ಅವರ ಹತ್ತಿರ ಬಂಗಾರದ ಹರಿವಾಣ ಗಳಲ್ಲಿ ವಿಧವಿಧವಾದ ಭೋಜನ ಪದಾರ್ಥಗಳನ್ನು ತೆಗೆದುಕೊಂಡು ಅಪೂರ್ವ ಸುಂದರಿಯರಾದ ಕೆಲ ಮಂದಿ ಸ್ತ್ರೀಯರು ಬಂದರು. ಪಿಂಗಳನು ಅವರನ್ನು ನೋಡಿದ ಕೂಡಲೇ "ಪದ್ಮಪಾದರೇ, ಇವರು ಗಂಧರ್ವ ಕಾಂತೆಯರೋ ? ಅಲ್ಲ, ಆ ರೂಪ ಧರಿಸಿದ ಪಿಶಾಚಿಗಳೋ ?" ಎಂದು ಪ್ರಶ್ನೆಮಾಡಿದನು.

"ಉಷ್" ಎಂದು ಪದ್ಮಪಾದನು ಪಿಂಗಳನಿಗೆ ಸುಮ್ಮನಿರುವಂತೆ ಎಚ್ಚರಿಸಿ, "ಪಿಂಗಳಾ ! ಇಷ್ಟು ಮೆಲ್ಲನೆ ಮಾತಾಡಿದರೂ ಅವುಗಳ ಕಿವಿಗೆ ಬೀಳ ಬಹುದು. ಇಂತಹ ಮಾತನ್ನು ಕೇಳಿದರೆ ಅವುಗಳಿಗೆ ಏನಾದರೂ ತೋರಬಹುದು. ನಮಗೆ ಸೇವೆ ಮಾಡಲು ಬಂದ ಪಿಶಾಚಿನಿಗಳಾದರೂ ಸರಿಯೆ, ನಾವು ಹೀನಗೊಳಿಸಿ ಮಾತಾಡುವುದು ಸರಿಯಲ್ಲ. ಅವರನ್ನು ಮೂರು ದಿನಗಳವರೆಗೆ ಗಂಧರ್ವ ಕಾಂತೆಯರೆಂತಲೇ ತಿಳಿದು ಸಂಭಾವಿಸೋಣ" ಎಂದು ತಿಳಿಹೇಳಿದನು.

ಪದ್ಮಪಾದನಿಗೂ ಪಿಂಗಳನಿಗೂ ಸುಖವಾಗಿ ಭೋಜನ ಮುಗಿಯಿತು. ಆಮೇಲೆ ಕರಿ ಶರೀರದ ಬಂಟರು ಕೆಲಮಂದಿ ಪಿಶಾಚಮಲ್ಲರನ್ನೂ, ಯೋಧ ರನ್ನೂ ಅಲ್ಲಿಗೆ ಕರೆದುಕೊಂಡು ಬಂದರು. ಅವರು ವಿಧವಿಧವಾದ ರೂಪಗಳನ್ನು ಧರಿಸಿ, ಕುಸ್ತೀ ಕಸರತ್ತು ಮಾಡಿದರು. ಕತ್ತಿ ತಿರುಗಿಸಿ ಖಿಣಾಲ್ ಖಿಣಾಲೆಂದು ಕಾಳಗವಾಡಿದರು. ಅದನ್ನೆಲ್ಲ ನೋಡುತ್ತಿದ್ದಂತೆ, ಪಿಂಗಳ ಪದ್ಮಪಾದರಿಗೆ ಸಮಯ ಹೋದುದೇ ಗೊತ್ತಾಗಲಿಲ್ಲ.

ಈ ವಿಧವಾಗಿ ಮೂರು ದಿನಗಳು ಕಳೆದು ಹೋದುವು. ನಾಲ್ಕನೆಯ ದಿನ ಪದ್ಮಪಾದನು ಆ ಮಾಯಾಭವನವನ್ನೂ, ಅದರೊಳಗಿದ್ದ ಮಾಯಾ ರೂಪಗಳನ್ನೂ ತನ್ನ ಮಂತ್ರಗಳಿಂದ ಮಾಯ ಮಾಡಿದನು. ಆ ಸ್ಥಳವು ಮೊದಲಿನಂತೆಯೇ ಖಾಲಿ ಯಾಯಿತು. ಪದ್ಮಪಾದನು ಈ ಮೊದಲು ಮಂತ್ರ ಪಠಿಸಿಕೊಂಡು ಕುಳಿತ ಅದೇ ಸ್ಥಳಕ್ಕೆ ಹೋಗಿ ನದಿಯ ಬದಿಯಲ್ಲಿ ಕುಳಿತನು.

ಅವನು ಪಿಂಗಳನನ್ನು ನೋಡಿ, ನದೀಗರ್ಭದಲ್ಲಿ ಮುಳುಗಿಹೋದ ಪಾಳುದೇಗುಲದ ಕಡೆಗೆ ಕೈ ತೋರಿಸಿ, "ಪಿಂಗಳಾ, ನಾನೀಗ ನದೀಜಲವನ್ನು ಇಂಗಿಸುವ ಕಾರ್ಯಕ್ಕೆ ತೊಡಗುತ್ತೇನೆ. ಈಸಾರಿ ನೀನು ಮಹಾಮಾಯನ ಸಮಾಧಿಯೊಳಗೆ ಪ್ರವೇಶಿಸುವಾಗ, ತೆಗೆದುಕೊಳ್ಳಬೇಕಾದ ಜಾಗ

ರೂಕತೆಗಳನ್ನು ಕುರಿತು ಮತ್ತೆ ಹೇಳಬೇಕಾದ ಅಗತ್ಯವಿಲ್ಲವಷ್ಟೆ? ಎಲ್ಲಾ ನೆನಪಿದೆಯೇ?" ಎಂದು ಕೇಳಿದನು.

"ಚೆನ್ನಾಗಿ ನೆನಪಿದೆ ಪದ್ಮಪಾದರೇ. ಈ ಮೊದಲು ತಿಂದ ಪೆಟ್ಟಿನ ಬಾವುಗಳು ಅವುಗಳನ್ನು ಸ್ವಲ್ಪವೂ ಮರೆಯದ ಹಾಗೆ ಮಾಡಿವೆ. ನಾನು ಏನನ್ನು ಮರೆತರೂ ಆ ಪೆಟ್ಟಿನ ನೋವನ್ನೂ, ನಿಮ್ಮ ರೂಪದಲ್ಲಿ ನನ್ನನ್ನು ಮೋಸಪಡಿಸಿದ ಮಹಾಮಾಯನ ಆ ಶಿಷ್ಯನ ಮುಖಭಾವವನ್ನೂ ಎಂದಿಗೂ ಮರೆಯಲಾರೆ. ಈಸಾರಿ ಆರನೆಯ ದ್ವಾರದಲ್ಲಿರುವವನಿಗೆ ಸರಿಯಾದ ಗತಿಗಾಣಿಸಿ ಬಿಡುತ್ತೇನೆ" ಎಂದನು ಪಿಂಗಳ.




ಪದ್ಮಪಾದನು ಮಂತ್ರವನ್ನು ಜಪಿಸಿ, ಸ್ವಲ್ಪ ಹೊತ್ತಿನೊಳಗೆ ನದೀಜಲವನ್ನು ಪೂರ್ತಿ ಇಂಗಿಸಿಬಿಟ್ಟನು. ಪಿಂಗಳನು ನಿರ್ಭಯವಾಗಿ ಮುಂದೆ ಕಾಣುವ ಪಾಳು ದೇವಾಲಯದ ಕಡೆಗೆ ಹೋದನು. ಮೊದಲನೇ ದ್ವಾರದಲ್ಲಿ ಮೊದಲಿನ ಹಾಗೆಯೇ ಹಾವು ಭುಸುಗುಡುತ್ತಲಿತ್ತು. ಪಿಂಗಳನು ಅದರ ಹೆಡೆಯನ್ನು ಮುಟ್ಟಿದ ಕೂಡಲೇ ಅದು ಪ್ರಾಣಬಿಟ್ಟಿತು. ಆ ಕ್ಷಣದಲ್ಲಿ ಬಾಗಿಲಿನ ಹಿಂದಿನಿಂದ ಕರ್ಣಕಠೋರವಾದ ಪ್ರಶ್ನೆ ಕೇಳಿಸಿತು.

"ನನ್ನ ಹೆಸರು ಪಿಂಗಳ. ನಾನು ಅವಂತೀ ನಗರದ ಬಲೆಗಾರ!" ಎಂದು ಪಿಂಗಳನು ಉತ್ತರ ಕೊಟ್ಟು ಧೈರ್ಯದಿಂದ ಬಾಗಿಲನ್ನು ದೂಡಿದನು. ಬಾಗಿಲು ದಢಾಲ್ಲನೆ ತೆರೆದುಕೊಂಡಿತು. ಪರ್ವತಾಕಾರದ ಕಠ್ರಾಗಿನವನು ಕತ್ತಿ ಝಳಿಪಿಸಿಕೊಂಡು ಮುಂದೆ ಬಂದನು.

ಅವನು ಪಿಂಗಳನನ್ನು ಕುತ್ತಿಗೆ ಬಾಗಿಸಲು ಹೇಳಿದುದೂ, ಪಿಂಗಳನು ಬಾಗುತ್ತಾ ಪರ್ವತಾಕಾರನನ್ನು ದೂಡಿ ಬೀಳಿಸಿದುದೂ ಎಲ್ಲಾ ಒಮ್ಮೆಗೇ ಹಿಂದಿನಂತೆಯೇ ನಡೆಯಿತು.

ಅದರಂತೆಯೇ ಪಿಂಗಳನು ಒಂದೊಂದೇ ದ್ವಾರವನ್ನು ದಾಟಿ, ಕಡೆಗೆ ಆರನೆಯ ದ್ವಾರವನ್ನು ಸಮಾಪಿಸುವಷ್ಟರಲ್ಲಿ ದ್ವಾರದ ಪಕ್ಕದಲ್ಲಿ ಪಿಂಗಳನ ತಾಯಿ ನಿಂತುಕೊಂಡು ಕಣ್ಣೀರು ಸುರಿಸುತ್ತ, "ಬೇಡಕಂದಾ! ನಿನಗೇಕೋ ಈ ಬಗೆಯ ಶ್ರಮ? ಯಾವನೋ ಲಾಭ ಪಡೆಯಲಿಕ್ಕಾಗಿ ನಿನ್ನನ್ನು ಹೀಗೆ ದುಡಿಸುತ್ತಾನಲ್ಲೋ! ಬೇಡಪ್ಪಾ. ಹಿಂದಿರುಗಿ ಹೋಗಿಬಿಡು. ಆ ಪದ್ಮಪಾದನು ಕಡೆಗೆ ನಿನ್ನನ್ನೂ ಹತ ಮಾಡುತ್ತಾನೆ. ನನ್ನ ಮಾತು ನಂಬು ಮಗಾ! ಸುಮ್ಮನೆ ನಿನ್ನ ಪಾಡಿಗೆ ಹಿಂದಿರುಗಿ ಹೋಗಿಬಿಡಪ್ಪಾ" ಎಂದು ದೀನಳಾಗಿ ಗೋಗರೆದಳು.

ಪಿಂಗಳನು ಅರೆಕ್ಷಣ ಬೆರಗಾದರೂ ಮರುಕ್ಷಣದಲ್ಲಿ ಹಿಂದಿನ ಅನುಭವ ಸ್ಮರಣೆಗೆ ಬಂತು. ಹಿಂದೆ ಪದ್ಮಪಾದನ ರೂಪದಲ್ಲಿ ತನ್ನನ್ನು ಮೋಸಪಡಿಸಿದ ಪಿಶಾಚಿಯೇ ಈಗಲೂ ತನ್ನ ತಾಯಿಯ ರೂಪ ಧರಿಸಿ ಮಾಯಾಮೋಡಿ ತೋರಿಸುತ್ತದೆ ಎಂದು



ಕೊಂಡನು. ಎಲ್ಲೋ ಮಾರುಮೂಲೆಯಲ್ಲಿರುವ ತನ್ನ ತಾಯಿ ಇಲ್ಲಿಗೆ ಬರುವುದೆಂದರೇನು ? ಇದೆಲ್ಲಾ ಪದ್ಮಪಾದರು ಹೇಳಿದಹಾಗೆ ಮಹಾ ಮಾಯನ ಶಿಷ್ಯರ ಮಾಯೆಯೇ ನಿಜ.

ಹೀಗೆಂದುಕೊಂಡು ಪಿಂಗಳನು ಹಲ್ಲು ಕಡಿಯುತ್ತ "ದಾರಿಯಿಂದ ಅಡ್ಡ ತೊಲಗು ! ನೀನು ಯಾರೆಂದು ನನಗೆ ಗೊತ್ತು ! ನನ್ನ ತಾಯಿಯ ರೂಪ ಧರಿಸಿದರೂ ಮತ್ತೇನು ಆಟ ತೋರಿಸಿದರೂ ಇನ್ನು ನನ್ನನ್ನು ಮೋಸಪಡಿಸಲು ಸಾಧ್ಯವೇ ಇಲ್ಲ. ನಾಶವಾಗಿ ಹೋಗು !" ಎಂದು ದ್ವಾರದ ಪಕ್ಕದಲ್ಲಿದ್ದ ಕತ್ತಿಯನ್ನೆತ್ತಿ ಮುಂದಕ್ಕೆ ಧುಮುಕಿದನು. ಅವನ ತಾಯಿಯ ರೂಪದ ಪಿಶಾಚಿ ಕಿರ್ರನೆ ಕಿರಿಚಿ ಮಾಯವಾಗಿ ಹೋಯಿತು.

ಪಿಂಗಳನು ಗಹಗಹಿಸಿ ನಗುತ್ತ ಆ ಕತ್ತಿಯನ್ನು ದೂರ ಬಿಸುಟು ದ್ವಾರವನ್ನು ದಾಟಿದನು. ಅವನ ಇದಿರಿನಲ್ಲಿ ಪಟ್ಟೆಯ ತೆರೆಗಳು ಗಾಳಿಗೆ ರಪರಪನೆ ಹಾರುತ್ತಿದ್ದುವು. ತೆಳ್ಳಗಿನ ಆ ತೆರೆಗಳ ಹಿಂದಿನಿಂದ ಕಣ್ಣು ಕೋರೈಸುವ ಕಾಂತಿಯನ್ನು ಹೊರಡಿಸುವ ಉನ್ನತಾಸನವು ಕಂಡುಬಂದಿತು.

ಪಿಂಗಳನು ಪಟ್ಟೆಯ ತೆರೆಯನ್ನು ತೊಲಗಿಸಿಕೊಂಡು ಒಳಗೆ ಹೋದನು. ರತ್ನ ಮಾಣಿಕ್ಯಗಳ ಕಾಂತಿಯಿಂದ ದೇದೀಪ್ಯಮಾನವಾಗಿ ಬೆಳಗುವ ಸಿಂಹಾಸನದ ಮೇಲೆ, ಮಹಾಮಾಯನು ಯೋಗನಿದ್ರೆಯಲ್ಲಿರುವ ಹಾಗೆ ಕಣ್ಣು ಮುಚ್ಚಿ ಕುಳಿತಿದ್ದನು. ನೋಡಿದ ಕೂಡಲೇ ಪಿಂಗಳನಿಗೆ ಮಹಾಮಾಯನು ಸಜೀವನಾಗಿರುವಂತೆ ಅನುಮಾನವಾಯಿತು. ಅಂತಲೇ ಪಿಂಗಳನು ಉಸಿರಾಡುವುದಕ್ಕೂ ಅಂಜಿ, ಬೆಕ್ಕಿನಹಾಗೆ ಹೆಜ್ಜೆಯ ಮೇಲೆ ಹೆಜ್ಜೆ ಇಡುತ್ತ ಮಹಾಮಾಯನನ್ನು ಸಮೀಪಿಸಿದನು. ಅವನ ದೃಷ್ಟಿ ಮಹಾಮಾಯನ ಎಡಗೈಯ ಬೆರಳಿನ ಕಡೆಗೆ ಹೋಯಿತು. ಆ ಬೆರಳಲ್ಲಿ ಕಾಂತಿ ಕಿರಣಗಳನ್ನು ಹೊರಡಿಸುವ ಉಂಗುರವು ಪಿಂಗಳನನ್ನು ಆಕರ್ಷಿಸಿತು.

ಪಿಂಗಳನು ಧೈರ್ಯದಿಂದ ಮುಂದೆ ಹೋದನು. ಶವರೂಪದ ಮಹಾಮಾಯನ ಬಲಗೈಯ ಬೆರಳಿನ ಉಂಗುರವನ್ನು ಮೆಲ್ಲಗೆ ಜಾರಿಸಿಕೊಂಡನು. ಅವನ ಭಯವು ಪೂರ್ತಿ ಬಿಟ್ಟುಹೋಯಿತು. ಇನ್ನೂ ಅವನಿಗೆ ಬೇಕಾದ ಎರಡು ವಸ್ತುಗಳಿದ್ದುವು. ವಜ್ರಗಳ ಹಿಡಿಯುಳ್ಳ ಕತ್ತಿ. ಅದು ಮಹಾ ಮಾಯನ ಸೊಂಟದಲ್ಲಿ ನೇತಾಡಿಕೊಂಡಿದ್ದಿತು. ಪಿಂಗಳನು ಅದನ್ನು ಒರೆಯೊಂದಿಗೇ ಬಿಚ್ಚಿ, ತನ್ನ ಸೊಂಟದಲ್ಲಿ ಬಿಗಿದುಕೊಂಡನು. ಇನ್ನು ಬೇಕಾದುದು ಭೂಗೋಳ.

ಪಿಂಗಳನು ನಾಲ್ಕು ಕಡೆಗಳನ್ನೂ ಪರಿಶೀಲಿಸಿ ನೋಡಿದನು. ಒಂದು ಮೂಲೆಯಲ್ಲಿ ಮೆಟ್ಟಿಲುಗಳಿರುವುದು ಕಾಣಿಸಿತು. ಆ ಮೆಟ್ಟಿಲುಗಳ ಕೆಳಭಾಗದಲ್ಲಿ ಎತ್ತರವಾದೊಂದು ಗುಂಡಗಿನ ಮೇಜಿನ

ಮೇಲೆ ಚಂದ್ರಬಿಂಬದಂತೆ ಹೊಳೆಯುವ ಭೂಗೋಳವಿರುವುದನ್ನು ನೋಡಿದನು. ಪಿಂಗಳನು ಹತ್ತಿರ ಹೋಗಿ ಆ ಗೋಳವನ್ನು ಪರೀಕ್ಷಿಸಿ ನೋಡಿದನು. ಅದರಲ್ಲಿ ಅನೇಕ ದೇಶಗಳೂ, ಅವುಗಳ ಮೇರೆಗಳೂ, ಕೆಲಸ ಕಾರ್ಯಗಳಲ್ಲಿ ಮಗ್ನರಾದ ಪ್ರಜೆಗಳೂ, ನದಿಗಳೂ ಪರ್ವತಗಳೂ, ಅಲ್ಲಲ್ಲಿ ತಿರುಗುವ ಹಾರುವ ಮೃಗ ಪಕ್ಷಿಗಳೂ ಅದರಲ್ಲಿ ಸ್ಪಷ್ಟವಾಗಿ ಕಾಣಿಸುತ್ತಿದ್ದುವು.

ಮಹಾಮಾಯನ ಸಮಾಧಿಯಿಂದ ತಾನು ಸಂಗ್ರಹಿಸಬೇಕಾದ ಮೂರು ವಸ್ತುಗಳನ್ನೂ ತಾನು ವಶಪಡಿಸಿಕೊಂಡೆನೆಂದು ಪಿಂಗಳನಿಗೆ ಸಂತೋಷವಾಯಿತು. ಅವನು ಭೂಗೋಳವನ್ನು ತನ್ನ ಹೆಗಲಲ್ಲಿ ಹೊತ್ತುಕೊಂಡು, ಕೊನೆಯಬಾರಿ ಒಮ್ಮೆ ಮಹಾಮಾಯನು ಕುಳಿತಿರುವ ಸಿಂಹಾಸನವನ್ನು ನೋಡಿ, "ಇನ್ನು ಅಪ್ಪಣೆ" ಎಂದು ಹೇಳಿಕೊಂಡು ಹೊರಗೆ ಹೊರಟನು.

ಅವನು ಆ ದೇವಾಲಯದೊಳಗಿನಿಂದ ಹೊರಗೆ ಹೋಗುವಾಗ, ಎಲ್ಲಿಂದಲೋ ಹೊರಡುವ ಸುಶ್ರಾವ್ಯವಾದ ಸಂಗೀತಧ್ವನಿ ಕೇಳಿಸತೊಡಗಿತು. ಅದರೊಂದಿಗೆ "ಭೇಷ್! ಪಿಂಗಳಾ! ನಿನ್ನ ಧೈರ್ಯ ಸಾಹಸಗಳೂ, ಬುದ್ಧಿವಂತಿಕೆಯೂ ನಮ್ಮೆಲ್ಲರನ್ನೂ ಮೆಚ್ಚಿಸಿಬಿಟ್ಟವೆ" ಎಂಬ ಶ್ಲಾಘನೆಯ ಮಾತುಗಳೂ ಮೃದುವಾಗಿ ಅವನ ಕಿವಿಗೆ ಬಿದ್ದುವು.

ಆ ಕಂಠಸ್ವರವು ಮಹಾಮಾಯನದೇನೋ ಎಂಬ ಅನುಮಾನದಿಂದ ಪಿಂಗಳನು ಹಿಂದಿರುಗಿ ನೋಡಿದನು. ಆದರೆ ಮಹಾಮಾಯನಲ್ಲಿ ಯಾವ ಚಲನವೂ ಕಾಣಿಸಲಿಲ್ಲ.

ಪಿಂಗಳನು ಎಲ್ಲಾ ದ್ವಾರಗಳನ್ನೂ ದಾಟಿ ಹೊರಗೆ ಬಂದ ಕೂಡಲೇ ಪದ್ಮಪಾದನು ಅವನನ್ನು ಕಾದು ನೋಡಿಕೊಂಡೇ ಇದ್ದನು. "ಭೇಷ್ ಪಿಂಗಳಾ! ನಾವು ಜಯಿಸಿಬಿಟ್ಟೆವು. ಇನ್ನು ಈ ಪ್ರಪಂಚದಲ್ಲಿ ನಮ್ಮ ಶಕ್ತಿಗೆ ಇದಿರೇ ಇಲ್ಲವೆಂದು ನಂಬು" ಎಂದು ಕೂಗುತ್ತಾ ಪಿಂಗಳನನ್ನು ಇದಿರುಗೊಂಡು ಓಡುತ್ತಾ ಬಂದನು.

ಆ ಸಮಯದಲ್ಲಿ ನದೀಗರ್ಭದಲ್ಲಿ ಅಗ್ನಿ ಪರ್ವತವು ಸಿಡಿಯುವಂತೆ ಕರ್ಣಕಠೋರವಾದ ಮಹಾಧ್ವನಿ ಕೇಳಲು ತೊಡಗಿತು. ಇಬ್ಬರೂ ನೋಡುತ್ತಿದ್ದಂತೆ ತಾಳೇ ಮರದ ಪ್ರಮಾಣದಲ್ಲಿ ನೀರಿನ ಧಾರೆಯೊಂದು ಭೂಮಿಯೊಳಗಿನಿಂದ ಮೇಲಕ್ಕೆದ್ದಿತು. ಪದ್ಮಪಾದನು ಅದನ್ನು ನೋಡಿದ ಕೂಡಲೇ ಒಮ್ಮೆಗೇ ಹಿಂದಕ್ಕೆ ಹಾರಿದನು. ಅದರಂತೆ ಪಿಂಗಳನೂ ಹಾರಿದನು. (ಇನ್ನೂ ಇದೆ)

